ಉಪನ್ಯಾಸ
ಗ್ರಂಥಮಾಲೆ

೧೧೯

# ಮಾನವ ವಿಜ್ಞಾನ ಹಾಗು ಇಂದಿನ ಭಾರತ

ಎಲ್. ಎಸ್. ಐನಾಪೂರ, ಎಂ.ಎ.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಫೆಬ್ರುವರಿ, ೧೯೭೧.

# ಮಾನವ ವಿಜ್ಞಾನ ಹಾಗು ಇಂದಿನ ಭಾರತ

ಉಪನ್ಯಾಸ ಗ್ರಂಥಮಾಲೆ

೧೨೯

# ಮಾನವ ವಿಜ್ಞಾನ ಹಾಗು ಇಂದಿನ ಭಾರತ

ಎಲ್. ಎಸ್. ಐನಾಪೂರ, ಎಂ.ಎ.




ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

೧೯೭೧

ಪ್ರಕಾಶಕರು :

**ಎಸ್. ಎಸ್. ಒಡೆಯರ,** ಎಂ.ಎ., ಎಲ್‌ಎಲ್. ಬಿ.

ರಜಿಸ್ಟ್ರಾರ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ: ಫೆಬ್ರುವರಿ, ೧೯೬೧

ಪ್ರತಿಗಳು : ೫,೦೦೦



**ಬೆಲೆ: ೨೫ ಪೈಸೆ**

ಮುದ್ರಕರು :

**ಫ. ಶಿ. ಭಾಂಡಗೆ**
ವಿದ್ಯಾವಾಹಿನಿ ವಿದ್ಯುನ್ಮುದ್ರಣ (ಪುಸ್ತಕ ವಿಭಾಗ)
ಗಂಗಾಪೂರಪೇಟೆ, ಗದಗ

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನ ಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವ ವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲಿಯಲ್ಲಿ ಈಗಾಗಲೇ ಬೇರೆ ಬೇರೆ ವಿಷಯಗಳನ್ನು ಕುರಿತು ೧೧೮ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು ನಾಲ್ಕು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು, ಅವರಿಗೆ ವಿಶ್ವಾವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದಾಲ್ಯಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೨-೨-೧೯೭೧

ಎ. ಎಸ್. ಅಡಕೆ
ಕುಲಪತಿ

# ಅರಿಕೆ

ಮಾನವ ಶಾಸ್ತ್ರದ ಅಧ್ಯಯನ - ಅಧ್ಯಾಪನಗಳು ಭಾರತೀಯ ವಿಶ್ವವಿದ್ಯಾನಿಲಯಗಳಲ್ಲಿ ಪ್ರಾರಂಭವಾದುದು ಸುಮಾರು ಐವತ್ತು ವರ್ಷಗಳಿಂದ ಮಾತ್ರ. ಅದು ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತಿರುವುದು ಕಳೆದ ಎರಡು ದಶಕಗಳಿಂದ.

ನವ ಸಮಾಜದ ನಿರ್ಮಾಣಕ್ಕಾಗಿ ಹೊಸ ಹೊಸ ಯೋಜನೆಗಳನ್ನು ಭಾರತದಂತಹ ಅಭಿವೃದ್ಧಿ ಹೊಂದುತ್ತಲಿರುವ ರಾಷ್ಟ್ರಗಳು ಹಮ್ಮಿಕೊಂಡು ಕಾರ್ಯೋನ್ಮುಖವಾಗಿವೆ. ಆ ಯೋಜನೆಗಳು ಯಶಸ್ವಿ ರೀತಿಯಲ್ಲಿ ಪೂರ್ಣಗೊಳ್ಳಬೇಕಾದರೆ, ಮಾನವ ಶಾಸ್ತ್ರಜ್ಞನ ನಿರ್ದೇಶನವು ಆವಶ್ಯಕವೆಂಬುದು ನಿರ್ವಿವಾದ ವಿಷಯ. ಇದನ್ನು ಮನಗಂಡ ಕರ್ನಾಟಕ ವಿಶ್ವವಿದ್ಯಾಲಯವು ಮಾನವ ಶಾಸ್ತ್ರದ ಅಧ್ಯಯನಕ್ಕೆ ಆಸ್ಪದ ಮಾಡಿಕೊಟ್ಟಿರುವುದು ಸ್ತುತ್ಯಾರ್ಹ. ಅಷ್ಟೇ ಅಲ್ಲ, ಈ ಶಾಸ್ತ್ರದ ಪರಿಚಯವು ಜನಸಾಮಾನ್ಯರಿಗೂ ಆಗಬೇಕೆಂಬ ಸದುದ್ದೇಶದಿಂದ ವ್ಯಾಸಂಗ ವಿಸ್ತರಣ ಯೋಜನೆಯನ್ವಯ ಬಳ್ಳಾರಿ ಜಿಲ್ಲೆಯ ಕೊಟ್ಟೂರಿನಲ್ಲಿ ಉಪನ್ಯಾಸವನ್ನೀಯಲು ನನ್ನನ್ನು ಆಮಂತ್ರಿಸಲಾಗಿತ್ತು.

ಕೊಟ್ಟೂರಿನಲ್ಲಿ ನಾನು ಮಾಡಿದ ಉಪನ್ಯಾಸವೇ ಈ ಚಿಕ್ಕ ಪುಸ್ತಕದ ರೂಪದಲ್ಲಿ ಹೊರಬರುತ್ತಿದೆ. ಮಾನವ ಶಾಸ್ತ್ರ

ವನ್ನು ಕುರಿತು ಗ್ರಂಥಗಳು ಕನ್ನಡದಲ್ಲಿ ತೀರ ವಿರಳ. ಆ ಶಾಸ್ತ್ರದ ಸವಿಸ್ತರವಾದ ವಿವೇಚನೆಗೆ ಈ ಚಿಕ್ಕ ಪುಸ್ತಕದಲ್ಲಿ ಅವಕಾಶವಿಲ್ಲ. ಆದರೂ ಮಾನವ ಶಾಸ್ತ್ರದ ಸ್ಥೂಲ ರೂಪರೇಖೆಗಳನ್ನೊಳಗೊಂಡ ಈ ಚಿಕ್ಕ ಹೊತ್ತಗೆ ಸಾಮಾನ್ಯ ಓದುಗರಿಗೆ ಈ ಶಾಸ್ತ್ರದ ಕಿಂಚಿತ್ ಪರಿಚಯವನ್ನಾದರೂ ಮಾಡಿಕೊಡಬಲ್ಲುದೆಂದು ನಂಬಿದ್ದೇನೆ. ಉಪನ್ಯಾಸವನ್ನೀಯಲು ಅವಕಾಶ ಕಲ್ಪಿಸಿಕೊಟ್ಟ ಪ್ರಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗದ ನಿರ್ದೇಶಕ ಶ್ರೀ ಚನ್ನವೀರ ಕಣವಿಯವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಸ್ತಪ್ರತಿಯು ಮುದ್ರಣಯೋಗ್ಯವಾಗುವಂತೆ ಅದನ್ನು ತಿದ್ದಿ ಸರಿಪಡಿಸಿದ ಮತ್ತು ಈ ಪುಸ್ತಕವು ಆದಷ್ಟು ತೀವ್ರ ಪ್ರಕಟವಾಗುವಂತೆ ಆಸ್ಥೆ ವಹಿಸಿದ ಸಹಾಯಕ ನಿರ್ದೇಶಕ ಶ್ರೀ ಎಸ್. ಬಿ ನಾಯಕ ಅವರಿಗೂ ನನ್ನ ಕೃತಜ್ಞತೆಗಳು.

ಈ ಪುಸ್ತಕದಲ್ಲಿ ಪ್ರಸ್ತಾಪಿಸಲ್ಪಟ್ಟ ವಿಷಯಗಳು ಹೆಚ್ಚು ಸಮರ್ಪಕವಾಗುವಂತೆ ಸೂಕ್ತವಾದ ಸಲಹೆಗಳನ್ನಿತ್ತ ನನ್ನ ಆತ್ಮೀಯ ಮಿತ್ರರಾದ ಪ್ರೊ. ಏ ಜಿ. ಹಿರೇಮಠ ಮತ್ತು ಪ್ರೊ. ಡಿ. ಎಚ್. ಭಡಂಕರ ಇವರನ್ನು ನಾನು ಸ್ಮರಿಸಲೇಬೇಕು.

ಕರ್ನಾಟಕ ಆರ್ಟ್ಸ ಕಾಲೇಜು,

ಧಾರವಾಡ

ಎಲ್. ಎಸ್. ಐನಾಪೂರ

೨೧-೨-೧೯೭೧

# ಪರಿವಿಡಿ

# ೧. ಹಿನ್ನೆಲೆ

ಕಳೆದ ಒಂದು ಶತಮಾನದಿಂದ ಇಂದಿನವರೆಗೆ ಅವ್ಯಾಹತ ವಾಗಿ ಮಾನವ ವಿಜ್ಞಾನವು ಬಹುಮುಖವಾಗಿ ಅಭಿವೃದ್ಧಿ ಹೊಂದುತ್ತಲಿದೆ. ಇಂಗ್ಲಂಡ, ಅಮೇರಿಕಾ. ಜರ್ಮನಿ, ಫ್ರಾನ್ಸ, ಮತ್ತು ಇನ್ನಿತರ ದೇಶಗಳಲ್ಲಿ ಮಾನವ ವಿಜ್ಞಾನವು ಅನೇಕ ಮೇಧಾವಿಗಳನ್ನು ಆಕರ್ಷಿಸಿತ್ತಲ್ಲದೆ ಅತ್ಯಂತ ವಿಚಾರಪೂರ್ಣ ವಾಗಿ ತತ್ವಗಳನ್ನು ಶೋಧಿಸಿ, ಮಾನವ ಸಮಾಜ ಮತ್ತು ಮಾನವ ಸಂಸ್ಕೃತಿಗಳನ್ನು, ಕೂಲಂಕಷವಾಗಿ ಅಧ್ಯಯನ ಮಾಡಲು ಅನುಕೂಲವಾದ ವಾತಾವರಣವನ್ನು ನಿರ್ಮಿಸಿದೆ.

ಹದಿನಾರನೇ ಶತಮಾನದಲ್ಲಿ ಯುರೋಪ ದೇಶದಲ್ಲಿ ವಿಚಾರಕ್ರಾಂತಿಯಾಯಿತು. ಜೀವನದ ಎಲ್ಲಾ ವಿಭಾಗಗಳಲ್ಲಿ ಮಹತ್ವಪೂರ್ಣವಾದ ಸಂಶೋಧನೆ ನಡೆಯಿತು. ಹೊಸ ಹೊಸ ಭೂ ಮತ್ತು ಸಮುದ್ರ ಮಾರ್ಗಗಳ ಶೋಧವು ನಡೆದು ಜಗ ತ್ತಿನ ವಿವಿಧ ಜನಾಂಗಗಳು ಪರಸ್ಪರ ಒಂದುಗೂಡಲು ಪ್ರಾರಂಭ ವಾಯಿತು. ಯುರೋಪದಲ್ಲಿ ಭೂ ಮತ್ತು ಸಮುದ್ರ ಪ್ರವಾ ಸಿಕರು, ವ್ಯಾಪಾರಸ್ಥರು ಮತ್ತು ಹದಿನೆಂಟನೆಯ ಶತಮಾನ ದಲ್ಲಿ ಕ್ರಿಶ್ಚಿಯನ್ ಧರ್ಮ ಪ್ರವರ್ತಕರು ಪ್ರಪಂಚದ ಬೇರೆ ಬೇರೆ ಭಾಗಗಳಿಗೆ ಭೆಟ್ಟಿ ನೀಡಿದ್ದರಿಂದ ಅವರಿಗೆ ಸಂಸ್ಕೃತಿಯ ವೈವಿಧ್ಯತೆಯ ಪರಿಚಯ ಆಯಿತು. ತಾವು ಪುನಃ ತಮ್ಮ

ದೇಶಗಳಿಗೆ ಮರಳುವಾಗ ವಿಚಿತ್ರವಾದ ಅಸ್ತ್ರ ಶಸ್ತ್ರ ಬಳಿಕೆ ಯಲ್ಲಿರುವ ವಸ್ತುಗಳನ್ನು ಪ್ರದರ್ಶನಕ್ಕೋಸುಗ ಜೊತೆಯಲ್ಲಿ ತೆಗೆದುಕೊಂಡು ಹೋದರು. ಮಾತೃಭೂಮಿಗೆ ಮರಳಿದಾಗ ತಮ್ಮ ಜನರಿಗೆ ಪ್ರಪಂಚದ ಇತರ ಭಾಗಗಳಲ್ಲಿ ವಾಸಿಸುವ ಬೇರೆ ಬೇರೆ ಜನರ ರೀತಿ ನೀತಿಗಳ ಬಗ್ಗೆ ತಮ್ಮ ಅನುಭವಗಳನ್ನು ವರ್ಣಿಸಿದರು. ಬೇರೆ ಜನಾಂಗದ ಜೀವನಕ್ರಮವು ಇವರಿಗೆ ವಿಚಿತ್ರವಾಗಿ ತೋರಿದವು. ಇದಕ್ಕೆ ಮುಖ್ಯ ಕಾರಣವೆಂದರೆ ಬೇರೆ ಜನಾಂಗಗಳು ತಮ್ಮಂತೆ ಇರಲಿಲ್ಲ. ಇದರಿಂದಾಗಿ ಅವರೆಲ್ಲರೂ ತಮ್ಮ ದಿನಚರಿಗಳಲ್ಲಿ ಬೇರೆ ಬೇರೆ ಜನಾಂಗಗಳ ಜೀವನದ ಬಗ್ಗೆ ಅನೇಕ ವಿಷಯಗಳನ್ನು ಬರೆದಿದ್ದರು. ಕ್ರೈಸ್ತ ಧರ್ಮ ಪ್ರಚಾರಕರು ೧೭ ಮತ್ತು ೧೮ ನೇ ಶತಮಾನಗಳಲ್ಲಿ ಯುರೋಪದ ಅನೇಕ ದೇಶಗಳಿಂದ ಪ್ರಪಂಚದ ಇತರ ಭಾಗಗಳಿಗೆ ಪಯಣ ಬೆಳಸಿದರು. ಅವರೆಲ್ಲರೂ ಅತಿ ಶಿಸ್ತಿನಿಂದ ಮತ್ತು ಧರ್ಮಾಭಿಮಾನದಿಂದ ಪ್ರೇರಿತರಾಗಿದ್ದು ಯಾವುದೋ ಒಂದು ಅತಿ ಮಹತ್ವದ ಮತ್ತು ಪುಣ್ಯದ ಕಾರ್ಯವನ್ನು ಮಾಡುತ್ತಿದ್ದೇವೆ ಎಂಬ ನಂಬುಗೆಯುಳ್ಳವರಾಗಿದ್ದರು. ಪ್ರಪಂಚದ ಹಿಂದುಳಿದ ಜನಾಂಗಗಳಲ್ಲಿ ಅವರು ತಮ್ಮ ಮತ ಪ್ರಚಾರದ ಕಾರ್ಯವನ್ನು ಕೈಕೊಂಡರು. ಹಾಗೆ ಮಾಡುವಾಗ ಅವರೆಲ್ಲರೂ ಅನೇಕ ಎಡರು ತೊಡರುಗಳನ್ನು ಅನುಭವಿಸಬೇಕಾಯಿತು. ಆಫ್ರಿಕಾ, ಅಮೇರಿಕಾ, ಭಾರತ ಮುಂತಾದ ದೇಶಗಳಲ್ಲಿ ಮತಾಂತರ ಕಾರ್ಯವು ಆರಂಭವಾಯಿತು. ಅವರ ಕಾರ್ಯ ವೈಖರಿಯು ಬಹು ಚತುರತೆಯಿಂದ ಕೂಡಿದ್ದಾಗಿತ್ತು. ಹಿಂದುಳಿದ ಜನಾಂಗ

ಗಳ ಕಷ್ಟದ ಸಮಯದಲ್ಲಿ ಮುಂದೆ ಬಂದು ತಮ್ಮ ಸಹಾನು ಭೂತಿ ಮತ್ತು ಅನುಕಂಪವನ್ನು ವ್ಯಕ್ತಪಡಿಸಿ ಕ್ರಮೇಣ ಜನ ರನ್ನು ತಮ್ಮ ಧರ್ಮೋಪದೇಶಗಳಿಂದ ಮುಗ್ಧಗೊಳಿಸಿ ಅವ ರನ್ನು ಮತಾಂತರಿಸಲಾಗುತ್ತಿತ್ತು. ಇಷ್ಟೆಲ್ಲಾ ಕಾರ್ಯವು ನಿರ್ವಿ ಘ್ನವಾಗಿ ಸಾಗಬೇಕಾದರೆ ಪಾದ್ರಿಗಳ ಕಾರ್ಯಕ್ಷಮತೆಯೇ ಕಾರಣವೆಂದು ಹೇಳಬೇಕು. ಅವರು ಜನಾಂಗಗಳನ್ನು ಬಹು ಸೂಕ್ಷ್ಮವಾಗಿ ಪರಿಶೀಲಿಸಿ ಅವರ ನಿತ್ಯ ಜೀವನ ಮತ್ತು ಜೀವನ ಮೌಲ್ಯಗಳ ಪರಿಚಯವನ್ನು ಆಳವಾಗಿ ಮಾಡಿಕೊಳ್ಳುತ್ತಿದ್ದರು. ಸಂಸ್ಕೃತಿಯ ನಿಜ ಸ್ವರೂಪವನ್ನು ತಿಳಿಯಲು ಕೂಲಂಕಷವಾಗಿ ಅವರ ನಿತ್ಯ ಜೀವನದಲ್ಲಿ ನಡೆಯುವ ಎಲ್ಲ ಘಟನೆಗಳ ಬಗ್ಗೆ ತಿಳಿಯಲು ಉತ್ಸುಕರಾಗಿದ್ದರು. ಇದಲ್ಲದೇ ಕ್ರೈಸ್ತ ಧರ್ಮೋ ಪದೇಶಕರು ತಾವು ಕಾರ್ಯವನ್ನು ಕೈಕೊಂಡ ಸಮಾಜಗಳ ಬಗ್ಗೆ ಅವಶ್ಯ ಮತ್ತು ಮುಖ್ಯವಾದ ಜೀವನ ಘಟನೆಗಳ ಬಗ್ಗೆ ವರದಿಗಳನ್ನು ತಯಾರಿಸಿ ಅವುಗಳನ್ನು ಸ್ವದೇಶಕ್ಕೆ ಕಳುಹಿಸು ತ್ತಿದ್ದರು. ಈ ಪ್ರಕಾರದ ಪ್ರಯತ್ನಗಳು ಅವರನ್ನು ಹಿಂದುಳಿದ ಜನಾಂಗಗಳ ಜೊತೆಗೆ ನಿಕಟವಾದ ಸಂಬಂಧಗಳನ್ನು ಸ್ಥಾಪಿ ಸಲು ಅನುಕೂಲವಾದ ವಾತಾವರಣವನ್ನು ನಿರ್ಮಿಸುವಲ್ಲಿ ಸಾರ್ಥಕವಾದವು. ಈ ವರದಿಗಳು ಆಗಿನ ಯುರೋಪದ ವಿದ್ವಾಂಸ ರಿಗೆ ಮಾನವ ಸಮಾಜದ ಮೇಲೆ ಒಂದು ಹೊಸ ಬೆಳಕನ್ನು ಬೀರಲು ಸಹಾಯ ಮಾಡಿವೆ.

ಪ್ರವಾಸಿಗಳು, ವರ್ತಕರು, ಧರ್ಮೋಪದೇಶಕರುಗಳಲ್ಲದೇ ಇನ್ನೊಂದು ವರ್ಗವು ಈ ಕಾರ್ಯದಲ್ಲಿ ಬಹಳ ಪ್ರಮುಖ

ಪಾತ್ರ ನಿರ್ವಹಿಸಿದೆ. ಈ ವರ್ಗವು ಆಡಳಿತ ವರ್ಗವಾಗಿದೆ. ೧೮ ಮತ್ತು ಹತ್ತೊಂಭತ್ತನೆಯ ಶತಮಾನಗಳಲ್ಲಿ ಪಾಶ್ಚಿಮಾತ್ಯರು ತಾವು ಗೆದ್ದುಕೊಂಡ ಪ್ರದೇಶಗಳನ್ನು ವಸಾಹತುಗಳನ್ನಾಗಿ ಮಾರ್ಪಡಿಸಿದರು. ವಸಾಹತು ಪ್ರದೇಶಗಳ ಆಡಳಿತವನ್ನು ನಡೆಸಲು ಮುಖ್ಯ ಅಧಿಕಾರಿಗಳನ್ನು ಕಳುಹಿಸಲಾಯಿತು. ಈ ಅಧಿಕಾರಿಗಳು ಬಹಳ ನಿಪುಣರು ಮತ್ತು ನಿಷ್ಠಾವಂತರಾಗಿದ್ದರು. ಪರದೇಶದ ಸ್ವತ್ತನಿಂದ ತಮ್ಮ ಮಾತೃಭೂಮಿಯ ಸಂಪತ್ತನ್ನು ಹೆಚ್ಚಿಸಿಕೊಳ್ಳಬೇಕೆಂಬ ಹಂಬಲವುಳ್ಳವರಾಗಿದ್ದರು. ಇದನ್ನು ಸಾಧಿಸಲು ಅವರು ಅನೇಕ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಬೇಕಾಯಿತು. ಆದರೂ ಅವುಗಳನ್ನು ಲೆಕ್ಕಿಸದೇ ವಸಾಹತುಗಳಲ್ಲಿದ್ದ ಮೂಲನಿವಾಸಿಗಳಿಂದ ಸಹಕಾರವನ್ನು ಪಡೆಯುವಲ್ಲಿ ಯಶಸ್ವಿಯಾದರು. ಚಿನ್ನ, ವಜ್ರ ಮತ್ತು ಇತರ ಲೋಹಗಳ ಹೇರಳವಾದ ಸಂಗ್ರಹವುಳ್ಳ ಸ್ಥಳಗಳನ್ನು ಪತ್ತೆಹಚ್ಚಿ ಅಲ್ಲಿದ್ದ ಮೂಲನಿವಾಸಿಗಳನ್ನು ಕೂಲಿಕಾರರನ್ನಾಗಿ ಪರಿವರ್ತಿಸಿ ತಮ್ಮ ಉದ್ದೇಶವನ್ನು ಈಡೇರಿಸಿಕೊಂಡರು. ಇಂತಹ ಮಹತ್ಕಾರ್ಯದ ಸಾಧನೆಯಾಗಬೇಕಾದರೆ ಅವರ ವ್ಯವಸ್ಥಾಬದ್ಧವಾದ ಸಾಂಸ್ಕೃತಿಕ ಜೀವನದ ಅಧ್ಯಯನವೇ ಮುಖ್ಯ ಕಾರಣವೆಂದು ಹೇಳಲು ಯಾವ ಸಂಶಯವೂ ಇಲ್ಲ. ಅಧಿಕಾರಿಗಳ ಬರಹಗಳು ಮಾನವ ಶಾಸ್ತ್ರದ ಅಭ್ಯುದಯಕ್ಕೆ ಆಧಾರಗಳಾಗಿವೆ. ಅವರ ಬರಹಗಳಲ್ಲಿ ಜನರ ಜೀವನದ ಚಿತ್ರವು ಪ್ರತಿಬಿಂಬಿಸುತ್ತಿತ್ತು. ಹೀಗೆ ಮಾನವ ವಿಜ್ಞಾನವು ಜನ್ಮ ತಾಳಿ ಪ್ರಗತಿ ಪಥದಲ್ಲಿ ಇಂದು ಭರದಿಂದ ಸಾಗುತ್ತಿದೆ.

ಅಂದಿನ ಯುರೋಪದ ತತ್ವಜ್ಞಾನಿಗಳು ಹಾಗು ವಿದ್ವಾಂಸರು ತಮ್ಮ ಗಮನವನ್ನು ಅಂಥ ಲೇಖನಗಳತ್ತ ತಿರುಗಿಸಿದರು. ತನ್ಮೂಲಕ ಸಮಾಜ ಮತ್ತು ಸಂಸ್ಕೃತಿಯ ಅಭ್ಯಾಸಗಳಲ್ಲಿ ಹೊಸ ವಿಚಾರ ಕ್ರಾಂತಿಯಾಯಿತು. ಇದೇ ಸಮಯದಲ್ಲಿ ಡಾರ್ವಿನ್ (*Darwin*) ಎಂಬ ವಿಜ್ಞಾನಿಯು ಜೀವಿಗಳ ಉತ್ಕ್ರಾಂತಿಯ ಬಗ್ಗೆ ಅತ್ಯಂತ ಮಹತ್ವಪೂರ್ಣವಾದ ಗ್ರಂಥವನ್ನು ಪ್ರಕಟಿಸಿದನು. ಆ ಗ್ರಂಥಕ್ಕೆ *Origin of Species* ಎಂದು ಹೆಸರು.

ಡಾರ್ವಿನ್ ಅನುಸರಿಸಿದ ವಿಧಾನವು ಸಮಾಜ ವಿಜ್ಞಾನಿಗಳ ವಿಧಾನದಲ್ಲಿ ಕ್ರಾಂತಿಯನ್ನುಂಟು ಮಾಡಿತ್ತು. 'ಉತ್ಕ್ರಾಂತಿವಾದ' ಸರಣಿಯು ಸಮಾಜ ಮತ್ತು ಸಂಸ್ಕೃತಿಗಳ ಅಧ್ಯಯನಗಳಲ್ಲಿ ಮಹತ್ವದ ಸ್ಥಾನವನ್ನು ಗಳಿಸಿತ್ತು. ಹೆನ್ರಿ ಮಾರ್ಗನ್ ( *Henry* Morgan ), ಇ. ಬಿ. ಟಾಯ್ಲರ್ *E. B. Tylor*), ಜೇಮ್ಸ್ ಫ್ರೇಝರ್ (*James Frazer*) ಮತ್ತು ಇನ್ನಿತರರು ಮಾನವಸಮಾಜದ ಉತ್ಕ್ರಾಂತಿಯ ಬಗ್ಗೆ ಮಹತ್ವಪೂರ್ಣವಾದ ಗ್ರಂಥಗಳನ್ನು ಬರೆದರು. ಇದಲ್ಲದೆ ಈ ವಿಧಾನವನ್ನು ಸಮಾಜದಲ್ಲಿದ್ದ ಸಂಘ ಸಂಸ್ಥೆಗಳ ಬೆಳವಣಿಗೆಗಾಗಿಯೂ ಸಹ ಬಳಸಲಾಯಿತು- ಉದಾಹರಣೆಗೆ ಕುಟುಂಬ ಮತ್ತು ವಿವಾಹಸಂಸ್ಥೆಗಳು.

ಮಾನವಶಾಸ್ತ್ರದ ಜನ್ಮವು ೧೯ ನೇ ಶತಮಾನದಲ್ಲಿ ಆಯಿತು. ಈ ಶಾಸ್ತ್ರದ ಮೂಲ ಶೋಧಕರು ಬೇರೆ ಬೇರೆ

ವಿಜ್ಞಾನಗಳಿಂದ ಬಂದವರು. ಅವರು ವಿವಿಧ ಜನಾಂಗಗಳ ಸಮಾಜರಚನೆ, ರೀತಿ-ನೀತಿಗಳು, ಸಂಪ್ರದಾಯಗಳು, ನಿಯಮ ಗಳು, ಅರ್ಥ ವ್ಯವಸ್ಥೆ ಮುಂತಾದವುಗಳನ್ನು ಅಭ್ಯಸಿಸಿ ಮಾನವ ಸಮಾಜದ ಅಧ್ಯಯನಕ್ಕಾಗಿ ಅನುಕೂಲವಾಗುವ ತತ್ವಗ ಳನ್ನು ನಿರೂಪಿಸಿದರು.

ಇನ್ನು ಕೆಲವು ವಿಜ್ಞಾನಿಗಳು ಮಾನವನ ದೈಹಿಕ ಉತ್ಕ್ರಾಂತಿಯ ಬಗ್ಗೆ ಶೋಧ ನಡೆಸಿದ್ದರು. ಡಾರ್ವಿನ್ನನು ಮಂಗಗಳು ಮಾನವನ ಪೂರ್ವಜರು ಎಂದು ಹೇಳಿದ್ದನು. "ಮಂಗನಿಂದ ಮಾನವ" ಈ ಉತ್ಕ್ರಾಂತಿಯು ಜರುಗಲು ಲಕ್ಷಾವಧಿ ವರ್ಷಗಳು ಹಿಡಿದವು. ಇಂದಿನ ಪರಿಸ್ಥಿತಿಯಲ್ಲಿ ಮಾನ ವನ ಜ್ಞಾನವು ಈ ದಿಸೆಯಲ್ಲಿ ಅಪೂರ್ಣವಾಗಿದೆ. ಈ ಉತ್ಕ್ರಾಂತಿಯು ಹೇಗೆ ನಡೆಯಿತು ? ಮತ್ತು ಇದರಲ್ಲಿ ಯಾವ ಯಾವ ನಿರ್ದಿಷ್ಟವಾದ ಹಂತಗಳಿದ್ದವು ? ಎಂಬುದರ ಬಗ್ಗೆ ಕಳೆದ ೧೦೦ ವರ್ಷಗಳಿಂದ ಸಂಶೋಧನೆ ನಡೆದಿದೆ ಈ ಸಂಶೋಧನೆಯಲ್ಲಿ ಬೆಳಕಿಗೆ ಬಂದ ಸಂಗತಿ ಎಂದರೆ ಡಾರ್ವಿನ್‌ನ ಪ್ರತಿಪಾದನೆಯು ತಪ್ಪೆಂದೂ ಮತ್ತು ಮಾನವನು ಮಂಗನಿಂದ ಉತ್ಕ್ರಾಂತಿ ಹೊಂದಿಲ್ಲವೆಂದೂ ತೀರ್ಮಾನಿಸಲಾಗಿದೆ. ಆದರೆ ಮಂಗ ಮತ್ತು ಮಾನವ ಇಬ್ಬರೂ ಬೇರೆ ಯಾವುದೋ ಒಂದೇ ಪೂರ್ವಜನಿಂದ ಬಂದಿದ್ದಾರೆ ಎಂದು ಊಹಿಸಲಾಗಿದೆ ಈ ಸಮ ಸ್ಯೆಯ ವಿವೇಚನೆಯನ್ನು ಮತ್ತು ಮಾನವನ ಇನ್ನಿತರ ಶಾರೀರಿಕ ಸಮಸ್ಯೆಗಳನ್ನು ಮಾನವ ವಿಜ್ಞಾನದ ಅಂಗವಾದ ಶಾರೀರಿಕ

ಮಾನವ ಶಾಸ್ತ್ರ ( *Physical Anthropology* ) ದಲ್ಲಿ ಅಭ್ಯಸಿಸುವರು.

೧೯ ನೇ ಶತಮಾನದ ಉತ್ತರಾರ್ಧದಲ್ಲಿ ಅನೇಕ ವಿಜ್ಞಾನಗಳು ಬೆಳಕಿಗೆ ಬಂದವು. ಆಗಸ್ಟ ಕೋಮ್ಟ (*Auguste Comte*) ನೆಂಬ ಫ್ರೆಂಚ ತತ್ವಜ್ಞಾನಿಯು ಸಮಾಜ ಶಾಸ್ತ್ರದ ತಳಪಾಯ ಹಾಕಿದನು. ಈ ಶಾಸ್ತ್ರದ ಮುಖಾಂತರ ಸಮಾಜದ ಇತಿಹಾಸ ಮತ್ತು ಸ್ಥಿತ್ಯಂತರ ಗತಿಗಳನ್ನು ತಿಳಿಯುಲು ಪ್ರಯತ್ನಿಸಲಾಗುವದು.

ಡಾರ್ವಿನ್ ಮತ್ತು ಟಾಯ್ಲರ್ ಎಂಬ ವಿಜ್ಞಾನಿಗಳು ಮಾನವ ಶಾಸ್ತ್ರದ ಬುನಾದಿಯುನ್ನು ಹಾಕಿದರು. ಮಾನವನನ್ನು ಅರಿಯಲು ಹೊಸ ಹೊಸ ಶಬ್ದಗಳನ್ನು ಉಪಯೋಗಕ್ಕೆ ತಂದರಲ್ಲದೆ ಇದ್ದ ಅನೇಕ ಶಬ್ದಗಳಿಗೆ ಹೊಸ ಅರ್ಥವನ್ನು ಕೊಡಲಾಯಿತು. ಉದಾಹರಣೆಗಾಗಿ ಸಂಸ್ಕೃತಿ ಎಂಬ ಶಬ್ದದ ಉಪಯೋಗವು ಸಾಧಾರಣವಾಗಿ ಎಲ್ಲ ತತ್ವಜ್ಞಾನಿಗಳ ಬರವಣಿಗೆಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಆ ಪದಕ್ಕೆ ಕೊಟ್ಟ ಅರ್ಥ ಅನೇಕ ಪ್ರಕಾರದ್ದಾಗಿದ್ದು ಬಹಳ ತೊಂದರೆಯುನ್ನುಂಟು ಮಾಡಿತ್ತು. ಮ್ಯಾಥ್ಯು ಅರ್ನಾಲ್ಡನೆಂಬವನು ಸಂಸ್ಕೃತಿ ಶಬ್ದದ ಅರ್ಥವನ್ನು ಸರ್ವೋತ್ತಮ ಮೌಲ್ಯಗಳೆಂದು ಮಾಡಿದ್ದಾನೆ. ಈ ಪ್ರಕಾರ ಸಂಸ್ಕೃತಿ ಶಬ್ದದ ಅರ್ಥದಿಂದ ಸಮಾಜದ ರೀತಿ ನೀತಿಗಳ ಅಧ್ಯಯನ ಮಾಡುವದು ಕಠಿಣವಾದ ಕೆಲಸವಾಗಿತ್ತು. ಅವರೆ ಇ ಬಿ. ಟಾಯ್ಲರ್ ಎಂಬ ಖ್ಯಾತ ವಿಜ್ಞಾನಿಯು ಪ್ರಪ್ರಥಮವಾಗಿ

ಸಂಸ್ಕೃತಿ ಶಬ್ದಕ್ಕೆ ಬಹಳ ವಿಶಾಲವಾದ ಅರ್ಥವನ್ನು ಕಲ್ಪಿಸಿ ಕೊಟ್ಟನು. ಅವನು ಅದಕ್ಕೆ ಕೊಟ್ಟ ಅರ್ಥವು ಸಮಾಜಜೀವಿಗಳ ಅಧ್ಯಯನದಲ್ಲಿ ಮಹತ್ವದ ಪಾತ್ರವನ್ನು ವಹಿಸಿತ್ತು. ಮಾನವನ ಜ್ಞಾನ. ನಿಯಮಗಳು. ಮೌಲ್ಯಗಳು. ಕಲೆ. ರೀತಿ, ನೀತಿಗಳು. ವಿಚಾರಗಳು, ಶ್ರದ್ಧೆಗಳು ಇತ್ಯಾದಿಗಳನ್ನೆಲ್ಲ ಸಂಸ್ಕೃತಿಯು ವ್ಯಾಪ್ತಿಯಲ್ಲಿಯೇ ಸೇರಿಸಿದ್ದಾನೆ. ಇದಲ್ಲದೆ ಮಾನವನು ಸಮಾಜದಲ್ಲಿದ್ದುಕೊಂಡು ಇತರರೊಡನೆ ಬೆರೆತು ಜೀವಿಸುವ ಕ್ರಮದಲ್ಲಿ ಪಡೆದ ಮತ್ತಿತರ ಬೌದ್ಧಿಕ ಪ್ರಯೋಜನಗಳನ್ನು ಸಹ ಸೇರಿಸಿದ್ದಾನೆ ಟಾಯ್ಲರನ ವಿಚಾರಗಳು ಅನೇಕ ಸಮಾಜತತ್ವಜ್ಞರಿಗೆ ಮಾನವ ಸಂಸ್ಕೃತಿಯ ಅಭ್ಯಾಸ ಮಾಡಲು ಪ್ರೋತ್ಸಾಹ ಕೊಟ್ಟವು.

ಮಾರ್ಗನ್ ಎಂಬ ತತ್ವಜ್ಞಾನಿಯು ಸಮಾಜದ ಉತ್ಕ್ರಾಂತಿಯ ಬಗ್ಗೆ ತನ್ನ ವಿಚಾರಗಳನ್ನು ಬಹಿರಂಗಪಡಿಸಿದನು ಮಾನವ ಸಮಾಜವು ಮೂರು ವಿಧದ ಹಂತಗಳಲ್ಲಿ ಉತ್ಕ್ರಾಂತಿ ಹೊಂದಿದೆ ಮೊದಲ ಹಂತಕ್ಕೆ ಕಾಡುತನ (*Savagery*), ಎರಡನೇ ಹಂತಕ್ಕೆ ಅಸಂಸ್ಕೃತತ್ವ (*Barbarism*) ಮತ್ತು ಕೊನೆಯ ಹಂತಕ್ಕೆ ನಾಗರಿಕತೆ (*Civilisation*) ಎಂದು ಹೇಳಿದ್ದಾನೆ. ಮತ್ತೆ ಮೊದಲನೆಯ ಹಂತದಲ್ಲಿ ಮೂರು ಭಾಗಗಳನ್ನು ಕೆಳಗಿನ, ಮಧ್ಯ ಮತ್ತು ಮೇಲಣ ಕಾಡುತನ (*Lower, Middle and Higher Savagery*) ಎಂದೂ, ಎರಡನೆ ಹಂತದಲ್ಲಿ ಕೆಳಗಿನ, ಮಧ್ಯ ಮತ್ತು ಮೇಲಣ ಅಸಂಸ್ಕೃತತ್ವ (*Lower Middle and Higher Barbarism*) ಎಂದೂ ಮೂರನೆಯ ಹಂತದಲ್ಲಿ ಪುರಾತನ (*Ancient*) ಮತ್ತು

ಆಧುನಿಕ (*Modern*) ಎಂದೆರಡು ವಿಧಗಳನ್ನೂ ತನ್ನ ಸಿದ್ಧಾಂತದಲ್ಲಿ ನಿರೂಪಿಸಿದ್ದಾನೆ. ಪ್ರತಿಯೊಂದೂ ಉಪಹಂತವು ಒಂದೊಂದು ಬಗೆಯ ವಿಶಿಷ್ಟ ರೀತಿಯ ಮತ್ತು ಬಹು ಮುಖ್ಯವಾದ ಶೋಧಗಳನ್ನು ಒಳಗೊಂಡಿರುತ್ತದೆ. ಆ ಶೋಧಗಳು ಜೀವನದ ವಿಕಾಸಕ್ಕೆ ನೆರವಾಗುವವಲ್ಲದೇ ಮಾನವ ಸಮಾಜವನ್ನು ಹೊಸರೂಪಕ್ಕೆ ತರುವವು. ಈ ವಿಚಾರಗಳನ್ನು ಟಾಯ್ಲರ ಮತ್ತು ಇತರ ಅಂದಿನ ತತ್ವಜ್ಞಾನಿಗಳು ಒಪ್ಪಿಕೊಂಡು ತಮ್ಮ ಲೇಖನಗಳಲ್ಲಿ ಇವುಗಳ ಉಲ್ಲೇಖ ಮಾಡಿದ್ದಾರೆ.

ಉತ್ಕ್ರಾಂತಿವಾದಿಗಳ ವಿಚಾರಗಳು ಸಂಸ್ಕೃತಿಯ ವ್ಯಾಖ್ಯೆಗೆ ಹೊಸ ರೂಪತಂದುಕೊಟ್ಟವು. ಸಂಸ್ಕೃತಿಯು ನಿರಂತರವಾಗಿ ಪ್ರಗತಿಪಥದಲ್ಲಿದೆ ಎಂಬುದನ್ನು ತಮ್ಮ ಎಲ್ಲಾ ಬರಹಗಳಲ್ಲಿ ಎತ್ತಿ ತೋರಿಸಿದ್ದಾರೆ. ಇದಲ್ಲದೆ ಪ್ರತಿಯೊಂದು ಸಮಾಜವು ಪ್ರಗತಿಪಥದಲ್ಲಿದ್ದು ಅದು ಕ್ರಮೇಣವಾಗಿ ನಿಶ್ಚಿತವಾದ ಮುಂದಿನ ಹಂತಕ್ಕೆ ಸಾಗುವದು ಎಂದು ಬರೆದಿದ್ದಾರೆ. ಇವರ ಬರಹಗಳು ೨೦ ನೇ ಶತಮಾನದ ಪ್ರಾರಂಭದಲ್ಲಿ ಇತಿಹಾಸವಾದಿಗಳಿಂದ ಮತ್ತು ವಿಸ್ತರಣವಾದಿ (*Diffusionists*) ಗಳಿಂದ ಬಹು ಕಟುವಾಗಿ ಟೀಕಿಸಲ್ಪಟ್ಟವು. ಏಕೆಂದರೆ ಅವರ ಬರಹಗಳಲ್ಲಿ ಸಂಸ್ಕೃತಿಯ ಪ್ರಗತಿಯು ಹೇಳಲಾದ ಅಂಶಗಳಲ್ಲಿ ಅನೇಕ ವಿಷಯಗಳ ಸೇರ್ಪಡೆಯಾಗಿರಲಿಲ್ಲ. ಸಂಸ್ಕೃತಿಯ ಪ್ರಗತಿಯು ಕೇವಲ ಆಂತರಿಕ ಶೋಧಗಳ ಮೇಲೆ ಅವಲಂಬಿಸಿದೆ, ಎಂಬುದು ವೈಜ್ಞಾನಿಕ ದೃಷ್ಟಿಯಿಂದ ಸಮಂಜಸವಾದುದಲ್ಲ. ಅದರ ಪ್ರಗತಿಗೆ ಆಂತರಿಕ ಶೋಧಗಳು ಸಹಾಯಕವಾದರೂ ಕೂಡ ಬೇರೆ ಬೇರೆ

ಸಂಸ್ಕೃತಿಗಳ ಸಂಪರ್ಕವು ಅತಿ ಮಹತ್ವದ್ದಾಗಿದೆ. ಇತಿಹಾಸವು ಇದಕ್ಕೆ ಸಾಕ್ಷಿಯಾಗಿದೆ.

೧೯೩೦ ರಿಂದ ಈಚೆಗೆ ಪುನಃ ಸಂಸ್ಕೃತಿ ಶಬ್ದದಲ್ಲಿ ಹೊಸ ಅರ್ಥವನ್ನು ಜೋಡಿಸಲಾಯಿತು. ಡರ್ಕಾಯಿಮ್. ಫ್ರೇಜರ್ ಮತ್ತು ಟಾಯ್ಲರ್ ರಂತಹ ಸಮಾಜ ತತ್ವಜ್ಞಾನಿಗಳ ವಿಚಾರಗಳಿಂದ ಪ್ರಚೋದನೆಗೊಂಡು ಮ್ಯಾಲಿನೋಸ್ಕಿ ಎಂಬ ಮಾನವ ವಿಜ್ಞಾನಿಯು ಸಂಸ್ಕೃತಿಯ ಲಕ್ಷಣಗಳನ್ನು ಪುನರ್ವಿಮರ್ಶಿಸಿದನು. ಇವನ ವಾದಸರಣಿಯು ಬರಬರುತ್ತ ಬಹಳ ಖ್ಯಾತಿಯನ್ನು ಪಡೆಯಿತು. ಇಂದಿನ ಯುಗದ ಅಂತ ರ್ರಾಷ್ಟ್ರೀಯ ಮಟ್ಟದ ಅನೇಕ ಮಾನವ ವಿಜ್ಞಾನಿಗಳು ಇವನಲ್ಲಿ ತರಬೇತಿ ಹೊಂದಿದವರಾಗಿದ್ದಾರೆ. ಅವರಲ್ಲಿ ಪರ್ಥ. ನಾಡೆಲ್. ಲೀಚ್ ಫ್ರೋರ್ಟೀಸ್ ಮುಂತಾದವರು ವಿಶ್ವ ವಿಖ್ಯಾತಿ ಯನ್ನೂ ಪಡೆದಿದ್ದಾರೆ. ಮ್ಯಾಲಿನೋಸ್ಕಿಯ ಪ್ರಕಾರ ಸಂಸ್ಕೃತಿಯು ಅನೇಕ ವಿಭಾಗಗಳಿಂದೊಡಗೂಡಿದೆ. ಎಲ್ಲ ವಿಭಾಗಗಳೂ ತಮ್ಮ ತಮ್ಮ ಕ್ರಿಯೆಗಳ ಮೂಲಕ ಪರಸ್ಪರ ಸಂಬಂಧವನ್ನು ಹೊಂದಿರುತ್ತವೆ. ಆದ್ದರಿಂದ ಸಂಸ್ಕೃತಿಯ ಯಾವದೇ ಭಾಗದಲ್ಲಿ ಬದಲಾವಣೆಯನ್ನು ತಂದರೆ ಅದು ಎಲ್ಲಾ ಭಾಗಗಳಲ್ಲಿ ಸಂಚರಿಸುವದು. ಅವುಗಳಿಗೆ ಆರ್ಥಿಕ. ರಾಜಕೀಯ. ಶೈಕ್ಷಣಿಕ. ಕಲಾತ್ಮಕ ಮತ್ತು ಸಾಮಾಜಿಕ ವಿಭಾಗಗಳೆನ್ನುವರು. ಮಾನವ ಜೀವನವನ್ನು ಸಮಗ್ರದೃಷ್ಟಿಯಿಂದ ಪರಿಶೀಲಿಸಲು ಪ್ರಯತ್ನ ನಡೆದುದು ಇದೇ ಮೊದಲನೆಯ ಸಲ. ಅಂದಿನಿಂದ ಇಂದಿನ ವರೆಗೆ ಮಾನವ ವಿಜ್ಞಾನಿಗಳು ಸಮಗ್ರತೆಯನ್ನೇ ಆಧಾರವಾಗಿಟ್ಟು ಕೊಂಡು ಮಾನವನ ಜೀವನವನ್ನು ಅಭ್ಯಸಿಸುತ್ತಾ ಬಂದಿದ್ದಾರೆ.

ಕ್ರೋಬರ್‌ನೆಂಬ ಆಧುನಿಕಯುಗದ ಮಾನವ ವಿಜ್ಞಾನಿಯು ಸಂಸ್ಕೃತಿಯ ನೈಜತೆಯ ಪರಿಚಯವನ್ನು ಮಾಡುವಾಗ ಅದಕ್ಕೆ ದಿವ್ಯ ಸೇಂದ್ರಿಯತ್ವ (*Super Orgainic*) ಎಂದು ಹೇಳಿದ್ದಾನೆ. ಎಂದರೆ ದಿವ್ಯ ಸೇಂದ್ರಿಯತ್ವವು ಸೇಂದ್ರಿಯತ್ವಕ್ಕೆ ವಿರುದ್ಧವಾಗಿರದೇ ಸೇಂದ್ರಿಯತ್ವಕ್ಕಿಂತ ಅಧಿಕವಾದುದೆಂದು ಪ್ರತಿಪಾದಿಸಿದ್ದಾನೆ.

ಸುಮಾರು ಒಂದು ಶತಮಾನದಿಂದ ಮಾನವ ವಿಜ್ಞಾನಿಗಳು ಮಾನವನ ಬಗ್ಗೆ ವೈಜ್ಞಾನಿಕವಾಗಿ ತಿಳಿದುಕೊಳ್ಳಲು ಶ್ರಮಿಸುತ್ತಿದ್ದಾರೆ. ಮಾನವನ ವಿವಿಧ ಅಂಶಗಳನ್ನು ಅಭ್ಯಸಿಸುವ ಉದ್ದೇಶವನ್ನು ಹೊಂದಿರುವುದು ಸರ್ವಸಮ್ಮತವಾದ ವಿಷಯವಾಗಿದೆ. ಮಾ ನ ವ ನ ವಂಶದ ಮೂಲ ಮತ್ತು ಉತ್ಕ್ರಾಂತಿಯ ಬಗ್ಗೆ ವೈಜ್ಞಾನಿಕವಾಗಿ ಪ್ರಯತ್ನ ನಡೆಸಿದವರೆಂದರೆ ಮಾನವ ವಿಜ್ಞಾನಿಗಳು. ಪಳಿಯುಳಿಕೆಗಳನ್ನು ಅಭ್ಯಸಿಸುವ ನಷ್ಟ ವಂಶಶಾಸ್ತ್ರ, ಭೂಗರ್ಭಶಾಸ್ತ್ರ, ರಸಾಯನಶಾಸ್ತ್ರ, ಇತ್ಯಾದಿಗಳ ಸಹಾಯದಿಂದ ಮಾನವನ ವಂಶದ ಉತ್ಪತ್ತಿಯ ಸಮಯ ಹಾಗು ಉತ್ಕ್ರಾಂತಿಯಾದ ಹಂತಗಳನ್ನು ತಿಳಿದುಕೊಳ್ಳಬಹುದು. ಈ ರೀತಿಯಾಗಿ ಮಾನವನ ಸಾಂಸ್ಕೃತಿಕ ಮತ್ತು ಶಾರೀರಿಕ ಉತ್ಕ್ರಾಂತಿಯ ಇತಿಹಾಸ ಪುನರ್‌ನಿರ್ಮಿಸುವ ಕಾರ್ಯವನ್ನು ಯಶಸ್ವಿಯಾಗಿ ಕೈಕೊಳ್ಳಬಹುದು. ಶಾರೀರಿಕ ಮಾನವ ಶಾಸ್ತ್ರವು ಈ ಕಾರ್ಯವನ್ನು ಇಂದಿಗೂ ಮಾಡುತ್ತಲೇ ಇದೆ.

---

# ೨. ಮಾನವಶಾಸ್ತ್ರದ ವಿಭಾಗಗಳು

ಮಾನವಶಾಸ್ತ್ರ ಕಳೆದ ಒಂದು ನೂರು ವರ್ಷಗಳಲ್ಲಿ ಬಹಳ ಪ್ರಗತಿಹೊಂದಿದೆ. ಈ ಶಾಸ್ತ್ರವು ಇಂದು ಅನೇಕ ಉಪ ಶಾಖೆಗಳಿಂದೊಡಗೂಡಿದೆ. ಶಾಸ್ತ್ರದ ಬೆಳವಣಿಗೆಯ ಲಕ್ಷಣವು ಅದು ಎಷ್ಟು ಉಪಶಾಖೆಗಳನ್ನು ನಿರ್ಮಿಸಿದೆ ಎಂಬುದರ ಮೇಲೆಯೇ ಅವಲಂಬಿಸಿದೆ. ಏಕೆಂದರೆ ಹೊಸ ವಿಚಾರಗಳು. ತಂತ್ರಗಳು. ಪ್ರತ್ಯೇಕ ಕಾರ್ಯಕ್ಷೇತ್ರಗಳು ಮತ್ತು ಹೊಸ ಶೋಧಗಳು ಶಾಸ್ತ್ರದಲ್ಲಿ ಪ್ರಗತಿಯನ್ನು ತರಲು ಕಾರಣೀ ಭೂತವಾಗಿರುತ್ತವೆ.

ಸಾಮಾನ್ಯವಾಗಿ ಮಾನವಶಾಸ್ತ್ರವು ಇಂದು ಅನೇಕ ಉಪ ಶಾಸ್ತ್ರಗಳಿಂದ ಕೂಡಿದೆ. ಯಾವುವೆಂದರೆ– ಶಾರೀರಿಕ ಮಾನವ ಶಾಸ್ತ್ರ. ಮಾನವ ಭಾಷಾಶಾಸ್ತ್ರ, ಸಾಂಸ್ಕೃತಿಕ ಮಾನವಶಾಸ್ತ್ರ. ಮಾನವ ಜಾತಿವಿಜ್ಞಾನ, ಸಾಮಾಜಿಕ ಮಾನವಶಾಸ್ತ್ರ. ಪ್ರಾಗ್ ಇತಿಹಾಸ. ಪ್ರತಿಯೊಂದೂ ಉಪಶಾಸ್ತ್ರವು ತನ್ನದೇ ಆದ ಮಾನವ ಜೀವನದ ಒಂದೊಂದು ವಿಶಿಷ್ಟವಾದಂಥ ಕಾರ್ಯ ಕ್ಷೇತ್ರದಿಂದ ಕೂಡಿದುದಾಗಿದೆ. ಅವುಗಳ ಪರಿಚಯುವನ್ನು ಮಾಡಿಕೊಳ್ಳುವದಕ್ಕಿಂತ ಮೊದಲು ಕೆಲವು ಮುಖ್ಯ ವಿಷಯುಗ ಳನ್ನು ಗಮನಿಸಬೇಕಾದುದು ಅವಶ್ಯ. ಎಲ್ಲ ಉಪಶಾಸ್ತ್ರಗಳೂ ಮಾನವನ ಸ್ಥಿತಿಗಳನ್ನು ಹೆಚ್ಚು ಕೂಲಂಕಷವಾಗಿ ತಿಳಿಯುವ ಪ್ರಯತ್ನದಲ್ಲಿ ತಮ್ಮ ಸಹಾಯುವನ್ನು ಸಲ್ಲಿಸುವದರಿಂದ ಅವು

ಗಳಲ್ಲಿ ಪರಸ್ಪರ ಸಂಬಂಧ ಮತ್ತು ಪರಸ್ಪರ ಅವಲಂಬನೆ ಇರಬೇಕಾದುದು ಆವಶ್ಯಕವಾಗಿದೆ. ಏಕೆಂದರೆ ಮಾನವನ ಜೀವನ ಮತ್ತು ಸ್ಥಿತಿಗತಿಗಳಲ್ಲಿ ಒಂದು ಐಕ್ಯತೆ ಇದೆ.

ಮತ್ತೊಂದು ವಿಷಯವೆಂದರೆ ಈ ಉಪಶಾಸ್ತ್ರಗಳು ಇತರ ಎಲ್ಲಾ ವಿಧದ ಶಾಸ್ತ್ರಗಳಿಂದ ಸಹಾಯ ತೆಗೆದುಕೊಂಡು ತಮ್ಮ ಧ್ಯೇಯವನ್ನು ಸಾಧಿಸಲು ಶ್ರಮಿಸುತ್ತವೆ. ಭೌತ ಶಾಸ್ತ್ರಗಳು, ಪ್ರಾಕೃತಿಕಶಾಸ್ತ್ರಗಳು ಸಮಾಜವಿಜ್ಞಾನಗಳು ಮತ್ತು ಶಾರೀರಿಕ ವಿಜ್ಞಾನಗಳಿಂದಲೂ ಸಹ ಸಹಾಯವನ್ನು ಪಡೆದು ತಮ್ಮ ತತ್ವಗಳನ್ನು ಪ್ರತಿಪಾದಿಸುತ್ತವೆ. ಈ ರೀತಿ ಯಾಗಿ ಮಾನವನು ತನ್ನ ಸುತ್ತ ತಾನೇ ನಿರ್ಮಿಸಿದ ಎಲ್ಲಾ ವಿಜ್ಞಾನಗಳೊಡನೆ ಮಾನವಶಾಸ್ತ್ರವು ಸಹಕರಿಸುವದು. ಆದರಿಂದ ಮಾನವಶಾಸ್ತ್ರದ ಪ್ರಗತಿಯು ಉಳಿದ ಶಾಸ್ತ್ರಗಳ ಪ್ರಗತಿಯ ಮೇಲೆ ಅವಲಂಬಿಸಿರುವುದು ಸಹಜ. ಮಾನವಶಾಸ್ತ್ರದ ವೇದಿ ಕೆಯ ಮೇಲೆ ಎಲ್ಲ ರೀತಿಯ ಶಾಸ್ತ್ರಗಳಿಗೆ ಸ್ವಾಗತವಿದೆ. ಇದು ಈ ವಿಷಯದ ವ್ಯಾಪ್ತಿ ಎಷ್ಟಿದೆ ಎಂಬುದನ್ನು ನಮ್ಮ ಗಮನಕ್ಕೆ ತರುವದು.

## ಶಾರೀರಿಕ ಮಾನವಶಾಸ್ತ್ರ:

೧೯ ನೇ ಶತಮಾನದಲ್ಲಿ ಜೀವಿಯ ಉತ್ಕ್ರಾಂತಿಯ ಬಗ್ಗೆ ಅನೇಕ ರೀತಿಯಲ್ಲಿ ಅಭ್ಯಾಸ ನಡೆಯಿತು. ಒಂದು ರೀತಿಯಲ್ಲಿ ನೋಡಿದರೆ ಗ್ರೀಕ್ ವಿದ್ವಾಂಸರ ಕಾಲದಿಂದಲೂ ಉತ್ಕ್ರಾಂತಿಯ ಬಗ್ಗೆ ಆಸಕ್ತಿ ಇತ್ತು. ಆದರೆ ೧೯ ನೇ ಶತಮಾನದ

ಉತ್ತರಾರ್ಧದಲ್ಲಿ ಚಾರ್ಲ್‌ಸ್ ಡಾರ್ವಿನ್‌ನ ಪ್ರಮುಖ ಗ್ರಂಥ ವಾದ ವಂಶಗಳ ಉತ್ಪತ್ತಿ (*Origin of Species*) ಪ್ರಕಟ ವಾದ ನಂತರವೇ ಜೀವಿಯ ಉತ್ಕ್ರಾಂತಿಯ ಬಗ್ಗೆ ವಿದ್ವಾಂಸರ ಆಸಕ್ತಿ ಹೆಚ್ಚಾಯಿತು ಎಂದರೆ ಅತಿಶಯೋಕ್ತಿಯೇನಲ್ಲ. ಮುಖ್ಯ ವಾಗಿ ಮಾನವನ ಉತ್ಕ್ರಾಂತಿಯ ಬಗ್ಗೆ ಹೊಸ ಹೊಸ ವಿಚಾರ ಗಳು ಬೆಳಕಿಗೆ ಬಂದವು ಮಾನವನು ಪೃಥ್ವಿಯ ಮೇಲೆ ಜನಿಸಿದ ಬಗ್ಗೆ ಅನೇಕ ರೀತಿಯ ವಿಚಾರಗಳು ಬಳಕೆಯಲ್ಲಿದ್ದವು. ಒಂದು ವಿಚಾರವೇನೆಂದರೆ, ಮಾನವನು ದೇವರಿಂದ ನಿರ್ಮಿಸಲ್ಪಟ್ಟವನು. ಅದೇ ರೀತಿಯಲ್ಲಿ ನಿಸರ್ಗದ ರಚನೆಯೂ ಕೂಡ ನಡೆದಿದೆ ಎಂದು ಹೇಳಲಾಗುತ್ತಿತ್ತು. ಕ್ರಿಸ್ತಧರ್ಮದ ಪ್ರಕಾರ ದೇವರಿಗೆ ಎಲ್ಲ ಸೃಷ್ಟಿಯನ್ನು ನಿರ್ಮಿಸಲು ಒಂದು ವಾರ ಕಾಲ ಶ್ರಮ ಪಡ ಬೇಕಾಯಿತು. ಮತ್ತು ಅವನು ನಂತರ ಒಂದು ದಿವಸ ವಿಶ್ರಾಂತಿ ಪಡೆದನು. ಬೇರೆ ಧರ್ಮದಲ್ಲಿಯೂ ಸಾಧಾರಣವಾಗಿ ಇದೇ ಕಲ್ಪನೆ ಇದೆ. ಹಿಂದೂ ಧರ್ಮದಲ್ಲಿ ಪರಮೇಶ್ವರನು ಲಕ್ಷ ಕೋಟಿ ಜೀವರಾಶಿಗಳನ್ನು ನಿರ್ಮಿಸಿದನು ಎಂಬ ವಿಚಾ ರವು ಬಳಕೆಯಲ್ಲಿದೆ. ಆದರೆ ವಿಜ್ಞಾನವು ಈ ದಿಸೆಯಲ್ಲಿ ಒಂದು ಬೇರೆ ಮಾರ್ಗವನ್ನೇ ಹಿಡಿದಿದೆ.

ಸುಮಾರು ಎರಡು ಶತಮಾನಗಳಿಂದ ಮಾನವನ ವಿಚಾ ರಗಳಲ್ಲಿ ಒಂದು ಕ್ರಾಂತಿಯೇ ಉಂಟಾಗಿದ್ದು, ಅವನು ವಿಜ್ಞಾ ನದ ಮೇಲೆ ತನ್ನ ಭರವಸೆಯನ್ನು ವ್ಯಕ್ತಪಡಿಸಿದ್ದಾನೆ. ಅವನ ನಂಬಿಕೆಯು ಇಂಥ ವಿಷಯಗಳಲ್ಲಿ ಧರ್ಮಗಳ ಹೇಳಿಕೆಯ ಮೇಲಿರದೆ ವಿಜ್ಞಾನಗಳ ಕಲ್ಪನೆಯಲ್ಲಿ ಹೆಚ್ಚಾಗತೊಡಗಿದೆ.

ಹಾಗೆ ಮಾಡುವಾಗ ಅವನು ಧರ್ಮಗಳ ಹೇಳಿಕೆಯ ಅವ ಹೇಳನೆ ಮಾಡದೆ ಶಾಂತ ರೀತಿಯಲ್ಲಿ ಹೊಸ ವಿಚಾರಗಳೊಂದಿಗೆ ಬೆರೆತಿದ್ದಾನೆ.

ಮಾನವನ ಉತ್ಕ್ರಾಂತಿಯು ಮಂಗನಿಂದ ಆಗಿದೆ ಎಂಬ ವಿಚಾರವು ಅನೇಕ ವರ್ಷಗಳ ವರೆಗೆ ವಿದ್ವಾಂಸರನ್ನು ಪ್ರಭಾವಗೊಳಿಸಿತ್ತು. ೧೯ ನೇ ಶತಮಾನದ ಕೊನೆಯಲ್ಲಿ ಅನೇಕ ವಿದ್ವಾಂಸರು ಮಾನವನ ಪೂರ್ವಜನನ್ನು ಶೋಧಿಸುವ ಕಾರ್ಯಕ್ಕೆ ಮೊದಲು ಮಾಡಿದರಲ್ಲದೆ ಅದರಲ್ಲಿ ತಮಗೆ ಯಶ ದೊರಕುವದೆಂಬ ನಂಬಿಗೆಯುಳ್ಳವರಾಗಿದ್ದರು. ಈ ರೀತಿಯಲ್ಲಿ ಮಾನವ ಉತ್ಕ್ರಾಂತಿಯಲ್ಲಿ ಗೋಚರವಾಗುವ ಕಳೆದ ಸಂಬಂಧಗಳನ್ನು ತುಂಬುವ ಹವ್ಯಾಸಕ್ಕೆ ಕೈ ಹಾಕಿದ್ದಾನೆ. ಆದರೆ ಇಂದು ವಾತಾವರಣ ಬದಲಾಯಿಸಿದೆ. ಮಾನವನು ಮಂಗನಿಂದ ಬಂದವನಲ್ಲ. ಆದರೆ ಮಂಗನು ಮತ್ತು ಮಾನವನು ಒಟ್ಟಿಗೆ ಬೇರಾವುದೋ ಒಂದು ಜೀವಿಯಿಂದ ಉತ್ಪನ್ನವಾದವರೆಂಬುದನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಈ ಜೀವಿಯು ಯಾವುದು ? ಎಂಬುದು ಇನ್ನೂ ನಿರ್ಧಾರವಾಗಿಲ್ಲ. ಈ ದಿಸೆಯಲ್ಲಿ ಶಾರೀರಿಕ ಮಾನವ ವಿಜ್ಞಾನವು (*Physical Anthropology*) ಇನ್ನೂ ಅಪೂರ್ಣವಾಗಿಯೇ ಉಳಿದಿದೆ.

ಶಾರೀರಿಕ ಮಾನವ ವಿಜ್ಞಾನವು ಮಾನವನ ಉತ್ಕ್ರಾಂತಿಯ ಬಗ್ಗೆ ಶೋಧ ನಡೆಸಲು ಆಸ್ಥೆ ತಾಳಿದೆ. ಇದಲ್ಲದೆ ಈ ಉತ್ಕ್ರಾಂತಿಯಲ್ಲಿ ಸಂಭವಿಸಿರುವ ಎಲ್ಲ ಶಾರೀರಿಕ

ಬದಲಾವಣೆಗಳನ್ನು ಸಹ ಅಭ್ಯಸಿಸುವದು. ಮಾನವ ಕೋಟಿಯನ್ನು ವಿವಿಧ ಜನಾಂಗಗಳಲ್ಲಿ (*Race*) ವಿಂಗಡಿಸುವ ಕಾರ್ಯವನ್ನು ಕೈಕೊಂಡಿದೆ. ಶಾರೀರಿಕ ಮಾರ್ಪಾಟುಗಳಲ್ಲಿ ಸಂಸ್ಕೃತಿಯ ಪಾತ್ರದ ಬಗ್ಗೆ ಶೋಧ ನಡೆಸುತ್ತದೆ

ಈ ಶಾಸ್ತ್ರವು ತನ್ನ ನೂರು ವರ್ಷಗಳ ಅವಧಿಯಲ್ಲಿ ಎರಡು ಮುಖ್ಯವಾದ ಅವಸ್ಥೆಗಳನ್ನು ಹೊಂದಿದೆ. ಮೊದಲನೇ ಅವಸ್ಥೆಗೆ ಪರಂಪರಾನುಗತ ಶಾರೀರಿಕ ಮಾನವ ವಿಜ್ಞಾನ (*Classical Physical Anthropology*) ಮತ್ತು ಎರಡನೆಯ ಅವಸ್ಥೆಗೆ ಹೊಸ ಶಾರೀರಿಕ ಮಾನವ ವಿಜ್ಞಾನ (*New physical Anthropology*) ಎಂದು ಹೇಳಿದ್ದಾರೆ. ಈ ಅವಸ್ಥೆಗಳು ಬೇರೆ ಸ್ವರೂಪದ್ದಾಗಿವೆ. ಮೊದಲನೆಯ ಅವಸ್ಥೆಯಲ್ಲಿ ಈ ಶಾಸ್ತ್ರವು ಮಾನವ ಶರೀರವನ್ನು ಅಳೆಯುವ ಕಾರ್ಯವನ್ನು ಕೈಕೊಂಡಿತು. ಆದರೆ ಅದರ ಪರಿಣಾಮವನ್ನು ವಿಮರ್ಶಿಸಲಿಲ್ಲ. ಎರಡನೆಯ ಅವಸ್ಥೆಯಲ್ಲಿ ಬಹು ಮುಖ್ಯವಾದ ಸಂಗತಿ ಎಂದರೆ ಲಭ್ಯವಾದ ವಿಷಯಗಳಿಂದ ಪರಿಣಾಮಗಳನ್ನು ಶೋಧಿಸುವ ಕಾರ್ಯ ರಭಸದಿಂದ ನಡೆಯಿತು. ಮಾನವ ಶರೀರದ ಯಾವದೇ ಭಾಗವು ಪ್ರತ್ಯೇಕವಾಗಿರಲಾರದೆ ಅವುಗಳಲ್ಲಿ ಒಂದು ಐಕ್ಯತೆ ಇದೆ ಎಂಬುದನ್ನು ಮನವರಿಕೆ ಮಾಡಿಕೊಂಡರು. ಉದಾಹರಣೆಗೆ ಮೂಗೂ ತೆಗೆದುಕೊಳ್ಳಬಹುದು. ಪರಂಪರಾನುಗತ ಶಾರೀರಿಕ ಮಾನವ ಶಾಸ್ತ್ರದಲ್ಲಿ ಮೂಗಿನ ಅಭ್ಯಾಸವೆಂದರೆ ಅದರ ಅಳತೆಯನ್ನು ಮಾಡುವದು. ಮತ್ತು ವಿವಿಧ ಜನಾಂಗಗವಲ್ಲಿ ಇದೇ ರೀತಿಯನ್ನು ಅನುಸರಿಸುವದಾಗಿದೆ. ಹೀಗೆ ಮಾ ಡು ವಾ ಗ

ಮೂಗು ಪ್ರತ್ಯೇಕವಾದ ಭಾಗ ಮತ್ತು ಇದು ಇನ್ನಿತರ ಭಾಗ ಗಳೊಂದಿಗೆ ಸಂಬಂಧವಿದೆ ಎಂಬುದೇ ಅವರ ಶೋಧದ ಹಿನ್ನೆಲೆಯಾಗಿತ್ತು. ಆದರೆ ಹೊಸ ಶಾರೀರಿಕ ಮಾನವ ಶಾಸ್ತ್ರ (*New Physical Anthropology*) ದಲ್ಲಿ ಹಾಗಿರಲಿಲ್ಲ.

ಇನ್ನೊಂದು ಸ್ವಾರಸ್ಯಕರವಾದ ಅಂಶವೇನೆಂದರೆ ಮೊದ ಲನೆಯ ಅವಸ್ಥೆಯಲ್ಲಿ ಮಾನವನ ಉತ್ಕ್ರಾಂತಿಯ ಮೇಲೆ ತೀರ ಅಲ್ಪ ಆಸ್ಥೆ ಇದ್ದಿತು. ಆದರೆ ಎರಡನೆಯ ಅವಸ್ಥೆಯಲ್ಲಿ ಅದರ ಅಭ್ಯಾಸವೇ ಮೂಲ ವಿಷಯವಾಗಿದೆ.

## ಸಾಂಸ್ಕೃತಿಕ ಮಾನವಶಾಸ್ತ್ರ

ಸಾಂಸ್ಕೃತಿಕ ಮಾನವಶಾಸ್ತ್ರವು ಬೇರೆ ಅವಸ್ಥೆಯ ಬಗ್ಗೆ ತನ್ನ ಕಾರ್ಯವನ್ನು ಮುಂದುವರಿಸಿದೆ. ಶಾರೀರಿಕ ಮಾನವ ವಿಜ್ಞಾನವು ಮಾನವನ ಉತ್ಕ್ರಾಂತಿಯ ಬಗ್ಗೆ ಮತ್ತು ಪ್ರಾಣಿ ಗಳ ಪ್ರಪಂಚದಲ್ಲಿ ಅವನ ಸ್ಥಾನವೇನು ? ಎಂಬುದರ ಬಗ್ಗೆ ಕಾರ್ಯೋನ್ಮುಖವಾಗಿದ್ದರೆ. ಮಾನವ ಸಾಂಸ್ಕೃತಿಕ ಶಾಸ್ತ್ರವು ಮಾನವನು ನಿರ್ಮಿಸಿದ ಸಂಸ್ಕೃತಿಯನ್ನು ಅಭ್ಯಾಸ ಮಾಡಲು ಮುಂದೆ ಬಂದಿದೆ.

ಮಾನವನು ಅನ್ಯ ಪ್ರಾಣಿಗಿಂತ ಬೇರೆಯುಳ್ಳವನು. ಅವನು ಸಂಸ್ಕೃತಿಯ ನಿರ್ಮಾಪಕನು. ಅವನು ಲಕ್ಷಾವಧಿ ವರ್ಷಗಳಿಂದ ಅದನ್ನು ನಿರ್ಮಿಸುತ್ತ ಬಂದವನು. ಅವನು ಸಂಸ್ಕೃತಿಯ ನೆರಳಿನಲ್ಲಿ ಬೆಳೆದು ತನ್ನ ಜೀವನದ ಎಲ್ಲ ವಿಧಗಳ ಬೇಡಿಕೆಯನ್ನು

ಸಂಸ್ಕೃತಿಯ ಮುಖಾಂತರ ಪೂರ್ತಿಮಾಡಿಕೊಳ್ಳುವನು. ಸಂಸ್ಕೃತಿ ರಹಿತ ಮಾನವ ಸಮಾಜವು ಪೃಥ್ವಿಯ ಮೇಲೆ ಬಾಳಲಾರದು. ಸಂಸ್ಕೃತಿಯನ್ನು ಪರಂಪರಾಗತವಾಗಿ ಹಸ್ತಾಂತರಿಸಲು ಅನುಕೂಲವಾದ ಸಾಧನವೆಂದರೆ ಭಾಷೆ. ಭಾಷೆಯನ್ನು ಬಳಸುವದು ಮಾನವನ ಮತ್ತೊಂದು ವಿಶಿಷ್ಟವಾದಂಥ ಲಕ್ಷಣ. ಈ ರೀತಿಯಿಂದ ಲಕ್ಷಾವಧಿ ವರ್ಷಗಳಿಂದ ನಿರ್ಮಿಸುತ್ತಿರುವ ಸಂಸ್ಕೃತಿಯನ್ನು ಅಭ್ಯಾಸ ಮಾಡುವ ಗುರಿಯು ಸಾಂಸ್ಕೃತಿಕ ಮಾನವಶಾಸ್ತ್ರದ್ದಾಗಿದೆ.

ಬೇರೆ ಬೇರೆ ಸಮಾಜಗಳಲ್ಲಿ ಸಂಸ್ಕೃತಿಯು ಬೇರೆ ಬೇರೆಯಾಗಿರುವದು. ಏಕೆಂದರೆ ಪ್ರತಿಯೊಂದು ಸಮಾಜವು ತನ್ನದೇ ಆದ ರೀತಿಯಲ್ಲಿ ತನ್ನ ಸಂಸ್ಕೃತಿಯನ್ನು ನಿರ್ಮಿಸಿರುತ್ತದೆ; ಮತ್ತು ಹಾಗೆಯೇ ವ್ಯಕ್ತಿಯನ್ನು ಬೆಳಸಿಕೊಂಡು ಬಂದಿರುತ್ತದೆ. ಸಂಸ್ಕೃತಿಯ ಬೆಳವಣಿಗೆಯ ಇತಿಹಾಸದಲ್ಲಿ ಹವಾಮಾನ, ಭೂಮಿ ಮತ್ತು ಇನ್ನಿತರ ವಿಷಯಗಳು ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ. ಸಂಸ್ಕೃತಿಯ ವೈವಿಧ್ಯತೆಗಳನ್ನು ಅಭ್ಯಸಿಸುವದು ಈ ಶಾಸ್ತ್ರದ ಮತ್ತೊಂದು ಗುರಿಯಾಗಿದೆ.

ಸಂಸ್ಕೃತಿಯ ಉಗಮ, ಉತ್ಕ್ರಾಂತಿ ಮತ್ತು ಅದರ ವೈವಿಧ್ಯತೆ ಇವೆಲ್ಲವುಗಳನ್ನು ವೈಜ್ಞಾನಿಕ ರೀತಿಯಲ್ಲಿ ಪರಿಶೀಲಿಸಲಾಗುತ್ತದೆ. ಈ ಶಾಸ್ತ್ರವು ಗತಿಸಿದ ಸಂಸ್ಕೃತಿಗಳ ಬಗ್ಗೆ ಅಭ್ಯಾಸ ಮಾಡುವದಾದ್ದರಿಂದ ಪ್ರಾಚ್ಯ ಶಾಸ್ತ್ರದ ಮೇಲೆ ಬಹಳವಾಗಿ ಅವಲಂಬಿಸಿರಬೇಕಾಗುತ್ತದೆ. ಇದಲ್ಲದೆ ಭೂಗರ್ಭ ಶಾಸ್ತ್ರದ ಮೇಲೆಯೂ ಸಹ ಅವಲಂಬಿಸಿರಬೇಕಾಗುತ್ತದೆ.

ವಿವಿಧ ಸಂಸ್ಕೃತಿಗಳ ಪರಸ್ಪರ ಸಂಬಂಧಗಳಿಂದ ಉಂಟಾಗುವ ಎಲ್ಲ ಪರಿಣಾಮಗಳ ಬಗ್ಗೆಯೂ ಅಭ್ಯಾಸ ಮಾಡಲ್ಪಡುತ್ತದೆ.

## ಸಾಮಾಜಿಕ ಮಾನವ ಶಾಸ್ತ್ರ

ಇದು ಮಾನವ ಶಾಸ್ತ್ರದ ಒಂದುಮಹತ್ವದ ಅಂಗವಾಗಿದೆ. ಇಂಗ್ಲಂಡಿನಲ್ಲಿ ಮಾನವ ಸಮಾಜಗಳ ಬಗ್ಗೆ ನಡೆದ ಶೋಧನ ಕಾರ್ಯಗಳಿಂದ ಹುಟ್ಟಿದ ಶಾಸ್ತ್ರವಿದಾಗಿದೆ. ಈ ಶಾಸ್ತ್ರದಲ್ಲಿ ಮಾನವ ಸಮಾಜದ ರಚನೆ, ಬೆಳವಣಿಗೆ ಮತ್ತು ಅದರ ಹೊಂದಾಣಿಕೆಗಳ ಬಗ್ಗೆ ವಿಚಾರ ವಿನಿಮಯ ನಡೆಯುತ್ತದೆ. ಇದು ಸಮಾಜ ವ್ಯವಸ್ಥೆಗಳ ತುಲನಾತ್ಮಕ ರೀತಿಯ ಅಭ್ಯಾಸ ಮಾಡುತ್ತದೆ. ತುಲನಾತ್ಮಕ ರೀತಿಯು ವಿವಿಧ ಸಮಾಜಗಳ ರಚನೆ ಹೊಂದಾಣಿಕೆ ಕಾರ್ಯಗಳು ಮತ್ತು ಇನ್ನಿತರ ವಿಷಯಗಳನ್ನು ಚರ್ಚೆಗೆ ತೆಗೆದುಕೊಳ್ಳುವದುಂಟು. ಸಮಾಜದ ಆಂತರಿಕ ರಚನೆ ಮತ್ತು ಬಾಹ್ಯ ಸಂಬಂಧಗಳ ಬಗ್ಗೆಯೂ ಕೂಡ ಶೋಧ ನಡೆಸುತ್ತದೆ. ಕೆಲವರು ಸಾಮಾಜಿಕ ಮಾನವ ಶಾಸ್ತ್ರ ಮತ್ತು ಸಮಾಜ ಶಾಸ್ತ್ರ (*Social Anthropology & Sociology*) ಇವೆರಡರಲ್ಲಿ ಯಾವ ಭೇದವೂ ಇಲ್ಲ ಎಂದು ವಾದ ಮಾಡಿದ್ದಾರೆ. ಸಮಾಜ ಶಾಸ್ತ್ರಕ್ಕೆ ತುಲನಾತ್ಮಕ ಸಮಾಜ ಶಾಸ್ತ್ರ (*Comparative Sociology*) ಎಂದೂ ಕರೆದಿದ್ದಾರೆ. ಹಲವು ವಿಷಯಗಳಲ್ಲಿ ಈ ಎರಡೂ ಶಾಸ್ತ್ರಗಳಲ್ಲಿ ಸಾಮ್ಯತೆ ಕಂಡು ಬಂದರೂ ಕೂಡ ಅವೆರಡರಲ್ಲಿ ಬಹಳಷ್ಟು ಭೇದವಿದೆ.

ಪ್ರತಿಯೊಂದು ವಿಜ್ಞಾನವು ಜನ್ಮತಾಳುವಾಗ ಅದಕ್ಕೆ ಪ್ರತ್ಯೇಕ ವಾದ ವಾತಾವರಣ ಮತ್ತು ವಿಶಿಷ್ಟವಾದ ಹಲವು ಕಾರಣಗಳಿರು ತ್ತವೆ. ಅವುಗಳ ಪರಿಣಾಮವು ಶಾಸ್ತ್ರದ ಲಕ್ಷಣ ಮತ್ತು ಧ್ಯೇಯ ಧೋರಣೆಗಳ ಮೇಲೆ ಆಗುವದು ಸಹಜವಾದ ವಿಷಯ. ಸಾಮಾಜಿಕ ಮಾನವ ಶಾಸ್ತ್ರದ ವಿಕಾಸವು ಆದಿವಾಸೀ ಸಮಾ ಜಗಳ ಅಭ್ಯಾಸದಿಂದ ಆಗಿದೆ. ಆದ್ದರಿಂದ ಶಾಸ್ತ್ರವು ಆದಿವಾ ಸಿಗಳ ಜೀವನದ ಹಿನ್ನೆಲೆಯಲ್ಲಿ ಬೆಳೆದಿದೆ. ಆದರೆ ಸಮಾಜ ಶಾಸ್ತ್ರವು ಆಧುನಿಕ ಸಮಾಜದಲ್ಲಿ ಔದ್ಯೋಗಿಕ ಕ್ರಾಂತಿಯ ನಂತರ ಸಂಭವಿಸಿದ ಸನ್ನಿವೇಶಗಳನ್ನು ಅಭ್ಯಾಸ ಮಾಡಲು ಜನ್ಮತಾಳಿದೆ–ಎಂಬ ವಿಷಯವನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ. ಅದರ ಮೂಲವು ತತ್ವಜ್ಞಾನದಲ್ಲಿದೆ. ಸಮಾಜ ಶಾಸ್ತ್ರವು ಆಧು ನಿಕ ಸಮಾಜದ ರಚನೆ, ವ್ಯವಸ್ಥೆ, ಸಂಘ ಮತ್ತು ಸಂಸ್ಥೆಗಳನ್ನು ಸಹ ಪರಿಶೀಲಿಸುತ್ತದೆ.

ಈ ರೀತಿಯಲ್ಲಿ ಸಾಮಾಜಿಕ ಮಾನವ ಶಾಸ್ತ್ರವು ಆದಿವಾಸಿ ಗಳ ಅಧ್ಯಯನದ ಹಿನ್ನೆಲೆಯಲ್ಲಿ ಪ್ರಗತಿ ಹೊಂದಿದೆ. ಸಮಾಜ ಶಾಸ್ತ್ರದ ಆಧಾರ ಸ್ತಂಭವು ಆಧುನಿಕ ಸಮಾಜದ ಮೇಲಿದೆ.

## ಪ್ರಾಗಿತಿಹಾಸ

ಮಾನವ ಶಾಸ್ತ್ರದ ಇನ್ನೊಂದು ಮುಖ್ಯವಾದ ಉಪ ಶಾಸ್ತ್ರವೆಂದರೆ ಪ್ರಾಗಿತಿಹಾಸ. ಪ್ರಾಗಿತಿಹಾಸದ ಮುಖ್ಯ ಗುರಿ ಎಂದರೆ ಭೂ ಸಂಶೋಧನೆಯ ಮೂಲಕ, ಅಳಿದು ಹೋದ ಜನಾಂಗ ಮತ್ತು ಸಂಸ್ಕೃತಿಗಳ ಮೇಲೆ ಹೊಸ ಬೆಳಕು ಹಾಕು

ವದು ಹಾಗೂ ಸಾಂಸ್ಕೃತಿಕ ಮಾನವಶಾಸ್ತ್ರ ಮತ್ತು ಸಾಮಾಜಿಕ ಮಾನವ ಶಾಸ್ತ್ರಗಳಿಗೆ ಅವಶ್ಯವಿರುವ ಸಹಾಯವನ್ನೊದಗಿಸುವದು. ಪುರಾತನ ಮತ್ತು ನವೀನ ಶಿಲಾಯುಗದ ಜನರು ಸಂಸ್ಕೃತಿಯ ನಿರ್ಮಾಣವನ್ನು ಯಾವ ರೀತಿಯಲ್ಲಿ ಮಾಡಿದ್ದಾರೆಂಬುದನ್ನು ಪ್ರಾಗಿತಿಹಾಸದಲ್ಲಿ ಕಾಣಬಹುದು. ಪ್ರಾಚ್ಯ ವಸ್ತು ಸಂಶೋಧನೆ ವಿಭಾಗವು ಈ ದಿಸೆಯಲ್ಲಿ ಬಹು ಮಹತ್ವದ ಕೆಲಸ ಮಾಡಿದೆ. ಪ್ರಾಗಿತಿಹಾಸವು ಸಂಸ್ಕೃತಿಯ ಇತಿಹಾಸದ ಪುನರ್ರಚನೆಯ ಕಾರ್ಯದಲ್ಲಿ ಸಹಾಯ ಮಾಡುತ್ತಿದೆ. ಇದು ಇಂದಿನ ಸಂಸ್ಕೃತಿಗೆ ಹಿನ್ನೆಲೆಯಾಗಿದೆ. ಆದ್ದರಿಂದ ಸಂಸ್ಕೃತಿಯ ಸಮಸ್ಯೆಗಳ ಅಧ್ಯಯನಕ್ಕೆ ಐತಿಹಾಸಿಕ ಹಿನ್ನೆಲೆಯನ್ನು ಒದಗಿಸುತ್ತದೆ. ಇಂದಿನ ಸಂಸ್ಕೃತಿಯ ಆಳವಾದ ಅಭ್ಯಾಸ ಮಾಡಬೇಕಾದರೆ ಅದರ ಮೂಲ ಮತ್ತು ಬೆಳವಣಿಗೆಯನ್ನು ತಿಳಿದುಕೊಳ್ಳುವದು ಅಗತ್ಯ. ಭೂ ಅಗೆತದ ಕಾರ್ಯದಲ್ಲಿ ಲಭ್ಯವಾದ ವಸ್ತುಗಳು ಅಳಿದು ಹೋದ ಸಂಸ್ಕೃತಿಯ ಕುರುಹುಗಳೆಂದು ಭಾವಿಸಲಾಗುತ್ತದೆ. ಭೂಗರ್ಭಶಾಸ್ತ್ರದ ಹೇಳಿಕೆಯ ಆಧಾರದ ಮೇಲೆ ಪ್ರಾಚ್ಯ ವಸ್ತುಗಳ ಉಪಯೋಗದ ಕಾಲವನ್ನು ಕಂಡುಹಿಡಿಯಲಾಗುವದು. ಇದಲ್ಲದೆ ಅವುಗಳಿಂದ ಅಂದಿನ ಕಾಲದ ಸಂಸ್ಕೃತಿಯ ಮುಖ್ಯವಾದ ಅಂಶಗಳನ್ನು ಕಂಡು ಹಿಡಿಯಬಹುದು. ಪ್ರಾಗಿತಿಹಾಸವು ಮಾನವ ಸಂಸ್ಕೃತಿಯ ಮೊದಲನೆಯ ಅಧ್ಯಾಯ.

ಶಾರೀರಿಕ ಮಾನವ ವಿಜ್ಞಾನವೂ ಸಹ ಪ್ರಾಗಿತಿಹಾಸದಿಂದ ಬಹಳ ಸಹಾಯವನ್ನು ಪಡೆದುಕೊಂಡಿದೆ.

## ಮಾನವ ಕುಲಶಾಸ್ತ್ರ

ಮಾನವ ಕುಲಶಾಸ್ತ್ರವು ಮಾನವಶಾಸ್ತ್ರದ ಒಂದು ಮಹತ್ವದ ಶಾಖೆಯಾಗಿದೆ ಈ ಶಾಸ್ತ್ರವು ಬೇರೆ ಬೇರೆ ಜನಾಂಗಗಳ ಬಗ್ಗೆ ವೈಜ್ಞಾನಿಕವಾಗಿ ಅಧ್ಯಯನ ಮಾಡುವ ಗುರಿಯನ್ನು ಹೊಂದಿದೆ. ಪ್ರತಿಯೊಂದು ಸಮಾಜಕ್ಕೆ ಅದರ ಸಂಸ್ಕೃತಿ ಇದ್ದೇ ಇರುತ್ತದೆ. ಈ ಸಂಸ್ಕೃತಿಯ ಅಧ್ಯಯನವನ್ನು ಕೂಲಂಕಷವಾಗಿ ಮಾಡಬೇಕಾದರೆ ಅದರ ಮೊದಲಿನ ಸ್ವರೂಪವನ್ನು ತಿಳಿದುಕೊಳ್ಳುವದು ಅವಶ್ಯ. ಪ್ರಂಪಚದಲ್ಲಿ ಪ್ರಮುಖ ಸಂಸ್ಕೃತಿಗಳು ಸ್ವತಂತ್ರವಾದ ವಾತಾವರಣದಲ್ಲಿ ಬೆಳೆದವಾಗಿರದೆ ಕಾಲಕಾಲಕ್ಕೆ ಲಭ್ಯವಾದ ಅನ್ಯ ಸಂಸ್ಕೃತಿಗಳ ಸಂಪರ್ಕಗಳಿಂದ ಬೆಳೆದು ಬಂದಂಥವಾಗಿವೆ. ಹೀಗೆ ಪ್ರಪಂಚದ ಎಲ್ಲಾ ಸಂಸ್ಕೃತಿಗಳು ಪರಸ್ಪರ ಸಂಪರ್ಕದಿಂದ ಅಭಿವೃದ್ಧಿಗೊಂಡಿವೆ — ಎಂದು ನಿರ್ದಿಷ್ಟವಾಗಿ ಹೇಳಬಹುದು. ಇಂತಹ ಸಂಪರ್ಕಗಳ ಸ್ವರೂಪವನ್ನು ಅರಿಯುವದು ಮಾನವ ಕುಲಶಾಸ್ತ್ರದ ಕಾರ್ಯವಾಗಿದೆ.

ಮಾನವ ಕುಲಶಾಸ್ತ್ರವು ಪ್ರಪಂಚದಲ್ಲಿ ಕಾರ್ಯಾನ್ವಿತವಾಗಿದ್ದ ಸಂಸ್ಕೃತಿಗಳನ್ನು ಅಭ್ಯಸಿಸುವುದಲ್ಲದೆ ಅವುಗಳಲ್ಲಿರುವ ಪರಸ್ಪರ ಸಾಮ್ಯ ಮತ್ತು ಭೇದಗಳನ್ನು ಅರಿಯುವ ಧ್ಯೇಯವನ್ನು ಹೊಂದಿದೆ- ಎಂದು ಹೇಳಬಹುದು. ಹಾಗೆ ಮಾಡುವಾಗ ಸಂಸ್ಕೃತಿಗಳ ಘಟಕಗಳನ್ನು ಗಣನೆಗೆ ತಂದುಕೊಳ್ಳಬೇಕಾಗುತ್ತದೆ.

## ಮಾನವ ಕುಲ ವಿವರಣಾ ಶಾಸ್ತ್ರ

ಮಾನವ ಕುಲ ವಿವರಣಾ ಶಾಸ್ತ್ರವು ವಿವಿಧ ಜನಾಂಗಗಳ ಜೀವನದ ಬಗ್ಗೆ ಸಂಗ್ರಹಿಸಲಾದ ವಿಷಯಗಳ ಪಟ್ಟಿ ಎಂದು ಹೇಳಬಹುದು. ಸಂಗ್ರಹಕಾರರು ತಮ್ಮ ವೈಯಕ್ತಿಕ ಬೇಕು ಬೇಡಗಳನ್ನು ಮತ್ತು ವಿಚಾರಗಳನ್ನು ಅವುಗಳಲ್ಲಿ ಬೆರಸಲಿಲ್ಲ. ಆದ್ದರಿಂದ ಅವರ ಬರಹಗಳಲ್ಲಿ ಸರಳತೆ ಮತ್ತು ವಾಸ್ತವಿಕತೆ ಎದ್ದು ತೋರುವದು. ವಿಜ್ಞಾನಿಗಳು ಈ ಬರಹಗಳನ್ನೇ ಆಧಾರವಾಗಿಟ್ಟುಕೊಂಡು ಸಮಾಜ ಸಿದ್ಧಾಂತಗಳನ್ನು ನಿರ್ಮಿಸಿದರು. ಮಾನವ ಕುಲಶಾಸ್ತ್ರದಲ್ಲಿ ವಿವೇಚಿಸಲ್ಪಟ್ಟ ಸಿದ್ಧಾಂತಗಳಿಗೆ ಮಾನವ ಕುಲ ವಿವರಣಾ ಶಾಸ್ತ್ರದಲ್ಲಿ ಸಂಗ್ರಹಿಸಲ್ಪಟ್ಟ ವಿಷಯಗಳೇ ಆಧಾರವೆಂಬುದನ್ನು ನಾವು ಮರೆಯುವಂತಿಲ್ಲ.

## ಮಾನವ ಭಾಷಾ ಶಾಸ್ತ್ರ

ಭಾಷಾಶಾಸ್ತ್ರವು ಇಂದು ಮಾನವ ವಿಜ್ಞಾನಿಯನ್ನು ಆಕರ್ಷಿಸಿದೆ. ಕಳೆದ ಐದಾರು ದಶಕಗಳಲ್ಲಿ ಭಾಷಾಶಾಸ್ತ್ರ ಮಾನವ ವಿಜ್ಞಾನಿಗಳ ಶೋಧ ಕಾರ್ಯಗಳಿಂದ ಪ್ರಭಾವಿತವಾಗಿದೆ. ಆದಿವಾಸಿಗಳ ಜೀವನವನ್ನು ಅಭ್ಯಸಿಸಲು ಮಾನವ ವಿಜ್ಞಾನಿಗಳು ಕಾರ್ಯಕ್ಷೇತ್ರ ಅಧ್ಯಯನ ತಂತ್ರವನ್ನು ಉಪಯೋಗಿಸಿದರು. ಆದ್ದರಿಂದ ಪ್ರಪಂಚದ ಆದಿವಾಸಿ ಜನಗಳ ಭಾಷೆಯ ಪರಿಚಯವೂ ಆಯಿತು. ಭಾಷಾಶಾಸ್ತ್ರಜ್ಞರ ಸಾಹಿತ್ಯವು ಅಭಿವೃದ್ಧಿಗೊಂಡಿತು.

ಮಾನವ ವಿಜ್ಞಾನಿಯ ದೃಷ್ಟಿಯಲ್ಲಿ ಸಂಸ್ಕೃತಿ ಮತ್ತು ಭಾಷೆಯಲ್ಲಿ ನಿಕಟವಾದ ಸಂಬಂಧವಿದೆ. ಅಲ್ಲದೆ ಭಾಷೆಯನ್ನು ಸಂಸ್ಕೃತಿಯ ಒಂದು ಅಂಗವೆಂದು ಹೇಳಲಾಗಿದೆ. ಒಂದು ಸಮಾಜದಲ್ಲಿದ್ದ ವ್ಯಕ್ತಿಗಳ ಜೀವನದಲ್ಲಿ ಅನುಭವಿಸುವ ಎಲ್ಲ ಅನುಭವಗಳನ್ನು ಭಾಷೆಯ ಮುಖಾಂತರವೇ ಉಳಿಸಿಕೊಂಡು ಮುಂಬರುವ ಪೀಳಿಗೆಗೆ ಬಿಟ್ಟು ಹೋಗುವರು. ಹೀಗೆ ತಲೆ ತಲಾಂತರಗಳಿಂದ ಬಂದ ಅನುಭವಗಳೇ ಸಂಸ್ಕೃತಿಗೆ ಆಧಾರ ವಾಗಿವೆ. ಆದ್ದರಿಂದ ಭಾಷೆಯ ಜ್ಞಾನವಿಲ್ಲದೇ ಸಂಸ್ಕೃತಿಯ ಒಳನೋಟವನ್ನು ಗ್ರಹಿಸುವದು ಸಾಧ್ಯವಿಲ್ಲ. ಇಂದು ಮಾನವ ವಿಜ್ಞಾನಿಗಳಿಗೆ ಭಾಷೆಗಳ ಬಗ್ಗೆ ಇರುವ ಆಸಕ್ತಿಯೇ ಮಾನವ ಭಾಷಾಶಾಸ್ತ್ರವನ್ನು ಅಭಿವೃದ್ಧಿಗೊಳಿಸಲು ಕಾರಣವಾಗಿದೆ.

ಇನ್ನೂ ಅನೇಕ ಶಾಖೆ ಮತ್ತು ಉಪಶಾಖೆಗಳು ಇಂದು ಮಾನವ ವಿಜ್ಞಾನದಲ್ಲಿ ಹುಟ್ಟಿಕೊಂಡು ಬೆಳೆಯುತ್ತಿವೆ. ಮಾನವನ ಸಮಗ್ರ ಜೀವನದ ಪರಿಚಯ ಮಾಡಿಕೊಳ್ಳುವ ಕೆಲಸ ಬಹಳ ಜಟಿಲವಾಗಿದೆ. ಮೇಲೆ ವಿವರಿಸಲಾದ ಎಲ್ಲ ಶಾಖೆಗಳೂ ಮಾನವ ಜೀವನದ ವಿವಿಧ ವಿಭಾಗಗಳನ್ನು ಅಧ್ಯ ಯನ ಮಾಡುತ್ತವೆ. ಆದ್ದರಿಂದ ಮಾನವ ಶಾಸ್ತ್ರವು ಬಹಳ ವ್ಯಾಪಕವಾದ ಕ್ಷೇತ್ರವನ್ನು ಹೊಂದಿದೆ ಎನ್ನುವದರಲ್ಲಿ ಸಂದೇಹವಿಲ್ಲ.

ಮೇಲ್ಕಂಡ ಮಾನವ ಶಾಸ್ತ್ರದ ವಿಭಾಗಗಳನ್ನು ಪರಿಶೀಲಿ ಸಿದ ನಂತರ ಒಂದು ಮಹತ್ವದ ಪ್ರಶ್ನೆ ಉದ್ಭವಿಸುವದು ಸಹಜ

ವಾಗಿದೆ. ಅದೇನೆಂದರೆ ತಮ್ಮದೇ ಆದ ಪ್ರತ್ಯೇಕ ಕಾರ್ಯಕ್ಷೇತ್ರವಿರುವದರಿಂದ ಅವುಗಳು ಪರಸ್ಪರ ಸಂಬಂಧ ಪಟ್ಟಿವೆಯೋ? ಅಥವಾ ಇಲ್ಲವೇ? ಎಂಬುದು. ಇಂತಹ ಸಂದೇಹಗಳನ್ನು ಸುಲಭವಾಗಿ ನಿವಾರಿಸಬಹುದು. ಪ್ರತಿಯೊಂದು ಮಾನವ ಶಾಸ್ತ್ರದ ವಿಭಾಗವು ತನ್ನ ವಿಶಿಷ್ಟವಾದ ಕಾರ್ಯಕ್ಷೇತ್ರವಿದ್ದರೂ ಅದು ಮಾನವನ ಸಮಗ್ರ ಜೀವನದ ಒಂದು ಭಾಗ ಮಾತ್ರವಾಗಿದೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇದೇ ಮಾತು ಉಳಿದ ಎಲ್ಲ ವಿಭಾಗಗಳಿಗೆ ಅನ್ವಯಿಸುವದು. ಆದ್ದರಿಂದ ಎಲ್ಲ ವಿಭಾಗಗಳು ತಮ್ಮ ತಮ್ಮ ರೀತಿಯಲ್ಲಿ ಮಾನವನನ್ನು ತಿಳಿಯಲು ಪ್ರಯತ್ನಿಸುತ್ತಿವೆ. ಮಾನವನ ಜೀವನದಲ್ಲಿ ಒಂದು ಐಕ್ಯತೆ ಇದೆ. ಏಕೆಂದರೆ ಯಾವ ವಿಭಾಗವನ್ನು ನಾವು ತೆಗೆದುಕೊಂಡರೂ ಅದು ಆ ಐಕ್ಯತೆಯ ಒಂದು ಅಂಗ ಮಾತ್ರವಿರುವದು. ಈ ಪ್ರಜ್ಞೆ ನಮ್ಮಲ್ಲಿ ಮೂಡಿ ಬೆಳೆದರೆ ಅವುಗಳಲ್ಲಿರುವ ಪರಸ್ಪರ ಅವಲಂಬನೆ ಮತ್ತು ಸಹಕಾರ ಬೆಳೆದುಕೊಂಡು ಬಂದೇ ಬರುವದು.

---

## ೩. ಮಾನವ ಶಾಸ್ತ್ರವು ಸಾಧಿಸಿದ ಮಹತ್ಕಾರ್ಯಗಳು

ಮಾನವನು ಬೆಳೆಯಿಸಿಕೊಂಡು ಬಂದ ಜ್ಞಾನವು ಅವನ ಜೀವನಕ್ಕೆ ಸಾಕಷ್ಟು ಪುಷ್ಟಿಕೊಟ್ಟಿದೆ. ನಿರುಪಯುಕ್ತವಾದ ಜ್ಞಾನವನ್ನು ಪ್ರಗತಿ ಪಥದಲ್ಲಿರಿಸಲು ಮಾನವನು ಒಪ್ಪುವದಿಲ್ಲ. ವಿಜ್ಞಾನವು ಮಾನವನ ಸೇವೆಗಾಗಿ ಮೀಸಲಾಗಿಡಲ್ಪಟ್ಟಿದೆ. ಅದೇ ರೀತಿಯಲ್ಲಿ ಈ ಶಾಸ್ತ್ರವೂ ಕೂಡ ಮಾನವನಿಗೆ ಉಪಯುಕ್ತವಾದುದಾಗಿದೆ.

ಈ ಶಾಸ್ತ್ರದ ಉಪಯೋಗವನ್ನು ಪ್ರಥಮ ಸಲ ಆಫ್ರಿಕೆಯಲ್ಲಿ ಮಾಡಿಕೊಳ್ಳಲಾಯಿತು. 'ಅಶಾಂತಿ' ಎಂಬ ಜನಾಂಗವು 'ಬಿಳಿಯ' ಜನರೊಡನೆ ವೈರ ಬೆಳಸಿತು. ೧೯೩೧ ರಲ್ಲಿ ಅಶಾಂತಿಯರ ಸುವರ್ಣ ಆಸನ (*Golden stool*) ವನ್ನು ಬಿಳಿಯರು ಅಪಹರಿಸಿದರು. ಆ ವಸ್ತುವು ಅವರಿಗೆ ಪ್ರೀಯವಾದುದಲ್ಲದೆ ಅವರ ಅನೇಕ ಧಾರ್ಮಿಕ ನಂಬಿಕೆಗಳ ಸಂಕೇತವಾಗಿದ್ದಿತು. ಅವರೀರ್ವರ ನಡುವೆ ನಿಕರವಾದ ಹೋರಾಟ ನಡೆಯುವದೆಂದು ತಿಳಿದ ನಂತರ ಈ ಸಂದಿಗ್ಧ ಪರಸ್ಥಿತಿಯನ್ನು ಹತೋಟಿಯಲ್ಲಿ ತರಲು ಮಾನವ ಶಾಸ್ತ್ರಜ್ಞನ ನೆರವನ್ನು ಕೇಳಲಾಯಿತು. ಅವನು ಪರಿಸ್ಥಿತಿಯನ್ನು ಪರಿಶಿಲೀಸಿದ ನಂತರ ಅದಕ್ಕೆ ಸೂಕ್ತವಾದ ಪರಿಹಾರವನ್ನು ಒದಗಿಸಿದನು. ಇದಾದ ನಂತರ ಎಲ್ಲ

ವಸಾಹತು ರಾಷ್ಟ್ರಗಳು ತಮ್ಮ ಅಧೀನದಲ್ಲಿದ್ದ ಪ್ರದೇಶಗಳನ್ನು ಸಮರ್ಥ ರೀತಿಯಲ್ಲಿ ಆಳಲು ನೇಮಿಸುತ್ತಿದ್ದ ಆಡಳಿತಗಾರರಿಗೆ ಮಾನವ ಶಾಸ್ತ್ರದಲ್ಲಿ ತರಬೇತಿ ಕೊಡಲು ಪ್ರಾರಂಭಿಸಿದರು. ಆಡಳಿತಗಾರರು ತರಬೇತಿ ಪಡೆದಾದ ನಂತರ ಹಿಂದುಳಿದ ಜನತೆಯನ್ನು ಹೀಯಾಳಿಸದೇ ಆತ್ಮೀಯತೆಯಿಂದ ಅವರನ್ನು ನೋಡಿಕೊಳ್ಳಲಾರಂಭಿಸಿದರು. ಆ ಆಡಳಿತಗಾರರೇ ಮುಂದೆ ವಿವಿಧ ಜನಾಂಗಗಳ ಬಗ್ಗೆ ಒಳ್ಳೆಯ ಮಟ್ಟದ ಬರೆಹಗಳನ್ನು ಬರೆದರು.

ಎರಡನೆಯ ಮಹಾಯುದ್ಧದಲ್ಲಿ ಮಿತ್ರ ರಾಷ್ಟ್ರಗಳು ತಮ್ಮ ಸೈನಿಕ ಕಾರ್ಯಾಚರಣೆಯಲ್ಲಿ ಮಾನವ ಶಾಸ್ತ್ರಜ್ಞರ ನೆರವನ್ನು ಯಾಚಿಸಿದರು. ರಾಷ್ಟ್ರೀಯ ಬೇಡಿಕೆಯನ್ನು ಗಮನಿಸಿ ತಮ್ಮ ಸೇವೆಯನ್ನು ಸಲ್ಲಿಸಲು ಅಂದಿನ ಪ್ರಮುಖ ಮಾನವ ವಿಜ್ಞಾನಿಗಳು ಮುಂದೆ ಬಂದರು. ಶ್ರೀಮತಿ ರುಥ್ ಬೆನೆಡಿಕ್ಟ್ ಎಂಬ ಮಾನವ ವಿಜ್ಞಾನಿಯು ಮಿತ್ರ ರಾಷ್ಟ್ರಗಳ ಕಾರ್ಯದಲ್ಲಿ ತಮ್ಮ ನೆರವು ನೀಡಿದರು. ಯುದ್ಧದಲ್ಲಿ ಪ್ರಮುಖ ಸೈನಿಕ ನೆಲೆಗಳ ಸ್ಥಳಗಳನ್ನು ಹುಡುಕಲು ಮತ್ತು ಅಲ್ಲಿನ ನಾಗರಿಕರ ಸಹಕಾರವನ್ನು ಮಿತ್ರ ರಾಷ್ಟ್ರಗಳಿಗೆ ಒದಗಿಸಲು ಪ್ರಯತ್ನಿಸಿದರು. ಅನೇಕ ಗುಡ್ಡಗಾಡಿನ ನಿವಾಸಿಗಳು ಮತ್ತು ನಡುಗಡ್ಡೆಗಳಲ್ಲಿ ವಾಸಿಸುತ್ತಿರುವ ಜನಾಂಗಗಳೊಡನೆ ಸಂಧಾನ ನಡೆಯಿಸಿ ಅವರ ಸಹಾನುಭೂತಿಯನ್ನು ಗಳಿಸುವದರಲ್ಲಿ ಯಶಸ್ವಿಯಾದರು. ಮಾನವ ವಿಜ್ಞಾನಿಗಳ ಸೇವೆಯು ಮಿತ್ರ ರಾಷ್ಟ್ರಗಳಿಗೆ ಜಯ ದೊರಕಿಸಿಕೊಡುವ ಕೆಲವು ಕಾರಣಗಳಲ್ಲಿ ಒಂದಾ

ಗಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಯುದ್ಧಕಾಲ ದಲ್ಲಿ ಸಲ್ಲಿಸಿದ ಸೇವೆ ಶ್ಲಾಘನೀಯವಾದದ್ದು. ಕ್ಲುಕೋಹಾನ್ ಎಂಬ ಆಧುನಿಕ ಮಾನವ ಶಾಸ್ತ್ರಜ್ಞನು ಎಲ್ಲ ಪ್ರಮುಖ ಮಾನವ ವಿಜ್ಞಾನಿಗಳ ಹೆಸರುಗಳ ಪಟ್ಟಿಯೊಂದನ್ನು ತಯಾ ರಿಸಿ ಅವರ ಸೇವೆಗಳ ಉಲ್ಲೇಖ ಮಾಡಿದ್ದಾನೆ. ಯುದ್ಧದ ನಂತ ರವೂ ಕೂಡ ಅಮೇರಿಕ ದೇಶದಲ್ಲಿ ಈ ಶಾಸ್ತ್ರವು ಬಹು ತೀವ್ರ ಗತಿಯಿಂದ ಪ್ರಗತಿಹೊಂದುತ್ತಿರುವದನ್ನು ಕಾಣಬಹುದಾಗಿದೆ. ಅವರ ಪ್ರಗತಿಯ ಮುಖ್ಯ ಅಂಶವೆಂದರೆ ಅಮೇರಿಕೆಯಲ್ಲಿದ್ದ ಮಾನವ ವಿಜ್ಞಾನಿಗಳು ತಮ್ಮ ಜನಾಂಗವನ್ನು ಅಭ್ಯಸಿಸು ವುದಲ್ಲದೆ ಪ್ರಪಂಚದ ಎಲ್ಲ ರಾಷ್ಟ್ರಗಳ ಮತ್ತು ಸಮಾಜಗಳ ಅಭ್ಯಯನದಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಈ ಕೆಲಸಕ್ಕೆ ಅನೇಕ ಖಾಸಗಿ ಸಂಸ್ಥೆಗಳು ಸಹಾಯ ಸಲ್ಲಿಸಿವೆ. ಆದ್ದರಿಂದ ಅಮೇರಿಕೆಯಲ್ಲಿ. ಇಂದು ಪ್ರಪಂಚದ ಯಾವದೇ ದೇಶವಾಗಲಿ ಅಥವಾ ಜನಾಂಗವಾಗಲಿ ಆದರ ಬಗೆಗೆ ಕೂಲಂಕಷ ಜ್ಞಾನ ಪಡೆದ ತಜ್ಞರಿದ್ದಾರೆ. ಉದಾಹರಣೆಗಾಗಿ, ಭಾರತ ದೇಶದ ಬಗ್ಗೆ ಅವರಿಗೆ ಬೇಕಾಗುವ ಎಲ್ಲ ಸಲಹೆಗಳನ್ನು ಕೊಡುವ ತಜ್ಞರು ಅಲ್ಲಿ ಸಿಗಬಹುದು. ಆಶ್ಚರ್ಯಕರ ಸಂಗತಿಯೆಂದರೆ ನಮ್ಮ ದೇಶದ ಬಗ್ಗೆ ಆ ತಜ್ಞರ ಸಲಹೆಗಳನ್ನು ಕೇಳುವ ಪ್ರಸಂಗ ಅನೇಕ ಸಲ ಬಂದುದಾಗಿದೆ. ರಾಷ್ಟ್ರೀಯ ಚಾರಿತ್ರ್ಯ ಕಂಡು ಹಿಡಿಯುವಂಥ ಅಭ್ಯಾಸವನ್ನು ಕೂಡ ಕೈಕೊಳ್ಳಲಾಗಿದೆ. ಮಾರಗರೇಟ ಮೀಡ್ ಎಂಬ ಶಾಸ್ತ್ರಜ್ಞಳು ಇಂತಹ ರೀತಿಯ ಕೆಲವು ಸಂಶೋಧನಾತ್ಮಕ ಕಾರ್ಯಗಳನ್ನು ಕೈಕೊಂಡಿದ್ದಾಳೆ.

ಮಾನವ ಶಾಸ್ತ್ರದ ಉಪಯೋಗ ಪ್ರತ್ಯಕ್ಷವಾಗಿ ಯುದ್ಧ ಕಾಲದಲ್ಲಿ ಮಾಡಿಕೊಂಡದ್ದರಿಂದ ಹಲವರಿಗೆ ಅನೇಕ ರೀತಿಯ ಸಂದೇಹಗಳು ಬರುವದು ಸಹಜವಾಗಿದೆ. ಮಾನವ ಶಾಸ್ತ್ರವು ಯುದ್ಧ ಕಾಲಕ್ಕೆ ನೆರವಾಗುವಂತಹ ಜ್ಞಾನವೆಂದೂ, ಶಾಂತ ಯುತ ಜೀವನದಲ್ಲಿ ಅದರ ಪಾತ್ರವೇನೂ ಇಲ್ಲವೆಂದೂ ವಾದಿ ಸಿದ್ದಾರೆ. ಇದಲ್ಲದೆ ವಸಾಹತುವಾದಿಯಾಗಿದ್ದು ಆಡಳಿತ ಗಾರರನ್ನು ತರಬೇತಿಗೊಳಿಸಿ ಅವರ ಹಿಡಿತವನ್ನು ಭದ್ರಗೊಳಿ ಸಲು ಸಹಾಯಕವಾದ ಕಾರಣ ಆಯಾ ಸಮಾಜಗಳು ತಮ್ಮ ಸ್ವಾತಂತ್ರ್ಯವನ್ನು ಬೇಗನೆ ದೊರಕಿಸಲು ಸಾಧ್ಯವಾಗಲಿಲ್ಲ. ಈ ಪ್ರಕಾರ ಹಲವು ರೀತಿಯಲ್ಲಿ ಈ ಶಾಸ್ತ್ರದ ಬಗ್ಗೆ ಅಪಪ್ರಚಾರ ನಡೆದರೂ ಸಹ ಮಾನವನು ಇಂದು ತನ್ನ ಜೀವನದ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಈ ವಿಜ್ಞಾನದ ಸಹಾಯವನ್ನು ಪಡೆ ದಿದ್ದಾನೆ. ಔದ್ಯೋಗೀಕರಣವಾದ ರಾಷ್ಟ್ರಗಳಲ್ಲಿ ಮಾನವ ಶಾಸ್ತ್ರವು ಔದ್ಯೋಗೀಕರಣದಲ್ಲಿ ನೆರವು ನೀಡುತ್ತಿರುವ ಎಲ್ಲ ಸಂಸ್ಥೆಗಳಿಗೂ ತನ್ನ ಸಹಾಯವನ್ನೊದಗಿಸಿದೆ. ರೋಗಿಗಳ ಚಿಕಿತ್ಸೆಯಲ್ಲಿಯೂ ಕೂಡ ಮಾನವ ವಿಜ್ಞಾನದ ಸಹಾಯ ಪಡೆಯಲಾಗಿದೆ. ಶಾರೀರಿಕ ಮಾನವ ವಿಜ್ಞಾನವು ಅನೇಕ ರೀತಿಯ ಉದ್ಯಮಗಳಿಗೆ ತನ್ನ ನೆರವು ನೀಡಿದೆ. ಉದಾಹರಣೆ ಗಾಗಿ ತಯಾರಿ ಉಡುಪುಗಳು (*Ready made dresses*) ಮತ್ತು ಪಾದರಕ್ಷೆಗಳನ್ನು ತಯಾರಿಸುವ ಉದ್ಯಮಗಳಿಗೆ ಅತಿ ಮುಖ್ಯ ವಾದ ಸಹಾಯವನ್ನೊದಗಿಸಿದೆ. ಶಾರೀರಿಕ ಮಾನವ ವಿಜ್ಞಾನಿ ಗಳು ಅನೇಕ ಜನಾಂಗಗಳ ಬಗ್ಗೆ ಅವುಗಳಿಗೆ ಬೇಕಾಗುವ ವಿವಿಧ

ವಯಸ್ಸಿನ ಜನಗಳ ದೇಹದ ಅಳತೆ ಮತ್ತು ಕಾಲಿನ ಅಳತೆಗಳ ಬಗ್ಗೆ ಸರಿಯಾದ ಜ್ಞಾನವನ್ನು ಒದಗಿಸಲು ಸಮರ್ಥರಾಗಿದ್ದಾರೆ.

ಎಲ್ಲಕ್ಕಿಂತ ಮುಖ್ಯವಾದ ಅಂಶವೆಂದರೆ ಹಿಂದುಳಿದ ರಾಷ್ಟ್ರಗಳು ಇಂದು ಅಭಿವೃದ್ಧಿ ಹೊಂದಲು ನಡೆಸಿರುವ ಮಹೋನ್ನತ ಕಾರ್ಯಗಳಲ್ಲಿ ಮಾನವ ಶಾಸ್ತ್ರವು ದಾರಿದೀಪವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ಮೊದಲನೆಯದಾಗಿ ಆದಿವಾಸಿಗಳ ಸಮಸ್ಯೆಗಳ ಮೇಲೆ "ಕ್ಷ" ಕಿರಣವನ್ನು ಬೀರಲು ಸಮರ್ಥವಾದ ಜ್ಞಾನವೆಂದರೆ ಇದೊಂದೇ ಆಗಿದೆ. ಜೀವನವನ್ನು ಸುಧಾರಿಸಿಕೊಂಡು ಆಧುನಿಕ ಸಂಸ್ಕೃತಿಯ ಲಾಭವನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿರುವ ಎಲ್ಲ ರಾಷ್ಟ್ರಗಳು ತಮ್ಮಲ್ಲಿದ್ದ ಆದಿವಾಸಿ ಜನಾಂಗಗಳನ್ನೂ ಕೂಡ ತಮ್ಮ ಗಮನಕ್ಕೆ ತೆಗೆದುಕೊಂಡಿದ್ದಾರೆ. ಆದಿವಾಸಿಯರ ಸಮಸ್ಯೆಗಳ ಬಗ್ಗೆ ಜ್ಞಾನವಿದ್ದ ಮಾನವ ವಿಜ್ಞಾನಿಗಳ ಸೇವೆಯನ್ನು ಎಲ್ಲ ರಾಷ್ಟ್ರಗಳು ಪಡೆಯಲು ಪ್ರಯತ್ನಿಸಿವೆ. ಮಾನವ ವಿಜ್ಞಾನಿಗಳು ಇಂದು ತಮ್ಮ ಕಾರ್ಯಕ್ಷೇತ್ರವನ್ನು ಆದಿವಾಸಿ ಜನಾಂಗಗಳಿಗೆ ಸೀಮಿತಗೊಳಿಸದೆ ಹಿಂದುಳಿದ ಗ್ರಾಮೀಣ ಜನಾಂಗಗಳ ಬಗ್ಗೆಯೂ ಅಧ್ಯಯನ ನಡೆಸಿದ್ದಾರೆ ಕಳೆದ ಸುಮಾರು ೨೦ ವರ್ಷಗಳಲ್ಲಿ ಈ ದಿಸೆಯಲ್ಲಿ ಗಮನೀಯವಾದ ಮತ್ತು ಶ್ಲಾಘನೀಯವಾದ ಪ್ರಗತಿ ಮತ್ತು ಯಶಸ್ಸನ್ನು ಸಂಪಾದಿಸಲಾಗಿದೆ. ಇದಲ್ಲದೆ ಇಂದು ಹಲವು ಮಾನವ ವಿಜ್ಞಾನಿಗಳು ನಗರಗಳಲ್ಲಿ ವಾಸಿಸುವದರ ಮೂಲಕ ನಗರೀಕರಣದ ಅಧ್ಯಯನಕ್ಕೂ ಸಹ ತಮ್ಮ ಕಾರ್ಯಕ್ಷೇತ್ರದಲ್ಲಿ ಸ್ಥಾನಕೊಟ್ಟಿದ್ದಾರೆ.

ಮಾನವ ಶಾಸ್ತ್ರವು ಮೊದಲಿನಿಂದಲೂ ಬೇರೆ ಬೇರೆ ಸಂಸ್ಕೃತಿಗಳ ಅಧ್ಯಯನದ ಶಾಸ್ತ್ರವಾಗಿದೆ. ಅದು ಆ ಧ್ಯೇಯವನ್ನೇ ಮುಂದಿಟ್ಟು ಕೊಂಡು ಪ್ರಪಂಚದ ಅನೇಕ ಸಂಸ್ಕೃತಿಗಳ ಅಧ್ಯಯನ ಮಾಡಿ ಮಾನವ ಜೀವನದ ವೈವಿಧ್ಯತೆಯ ಪರಿಚಯವನ್ನು ಮಾಡಿ ಕೊಟ್ಟಿದೆ. ಈ ರೀತಿ ಸಂಗ್ರಹಿಸಲ್ಪಟ್ಟ ಜ್ಞಾನವು ಮಾನವನ ಉನ್ನತಿಗೆ ಮಾರ್ಗವನ್ನು ತೋರಿಸಿತು. ಪಾಶ್ಚಿಮಾತ್ಯ ರಾಷ್ಟ್ರ ಗಳು ನೂರಾರು ವರ್ಷಗಳಿಂದ ಜೀವನ ಸಂಘರ್ಷದಲ್ಲಿ ಸಾಧಿಸಿದ ಕೆಲವು ಶೋಧಗಳನ್ನು ಉಳಿದ ಜನಾಂಗಗಳಿಗೆ ಸಾಧಿಸಲು ಸಾಧ್ಯ ವಾಗಲಿಲ್ಲ ಔದ್ಯೋಗಿಕ ಕ್ರಾಂತಿಯ ನಂತರ ಯುರೋಪಿ ಯನ್ನರು ಪ್ರಪಂಚದ ನಾನಾ ಭಾಗಗಳಲ್ಲಿ ವಾಸಿಸಿ ಅಲ್ಲಿಯ ವಾತಾವರಣದ ಮೇಲೆ ತಮ್ಮ ಪ್ರಭಾವವನ್ನು ಬೀರಿ ರಾಜ ಕೀಯ ಚದುರಂಗದಾಟದಲ್ಲಿ ಯಶಸ್ಸನ್ನು ಗಳಿಸಿದರು. ನೂರಾರು ವರ್ಷಗಳ ತನಕ ಅನೇಕ ದೇಶಗಳ ಜನರನ್ನು ಆಳಿ ದರು. ಈ ಯಶಸ್ಸಿನ ಹುಮ್ಮಸ್ಸಿನಲ್ಲಿ ತಾವು ಜಗತ್ತಿನಲ್ಲಿಯೇ ಶ್ರೇಷ್ಠವೆಂದು ತಮ್ಮನ್ನು ತಾವೇ ಹೊಗಳಿ ಅನ್ಯರನ್ನು ಕೀಳು ಮಟ್ಟದವರೆಂದು ಹೀಯಾಳಿಸಲು ಪ್ರಾರಂಭಿಸಿದರು. ತಮ್ಮ ಶ್ರೇಷ್ಠತೆಯ ಮದದಿಂದ ಮತ್ತರಾದ ಅವರ ಕಣ್ಣಿಗೆ ಉಳಿದವರು ಮಾನವರಾಗಿ ಕಾಣಲಿಲ್ಲ. ಉಳಿದ ಜನಾಂಗಗಳು ಅವರಿಗೆ ಭಾರವಾದವುಗಳೆಂದು ಹೇಳಿಕೊಂಡರಲ್ಲದೆ ಧರ್ಮ ಪ್ರಚಾರ ಕರನ್ನೂ ಕಳುಹಿಸಿ ಮಿಶನ್‌ಗಳನ್ನು ಸ್ಥಾಪಿಸಿ ಉಳಿದ ಜನಾಂಗ ಗಳನ್ನು ಕ್ರೈಸ್ತ ಮತಕ್ಕೆ ಪರಿವರ್ತಿಸಿ ಅವರನ್ನು ಸುಸಂಸ್ಕೃತರ ನ್ನಾಗಿ ಮಾಡಲು ಮುಂದಾದರು. ಶ್ವೇತ ವರ್ಣೀಯರು

ಅನ್ಯರನ್ನು ಕಡಿಮೆ ಮಾನಸಿಕ ಯೋಗ್ಯತೆಯುಳ್ಳವರೆಂದೂ ಮತ್ತು ಅಸಂಸ್ಕೃತರೆಂದೂ ತಿಳಿದು ಅದರ ಪ್ರಚಾರವನ್ನೇ ಮಾಡಿದರು. ಇದರಿಂದ ವಿವಿಧ ಜನಾಂಗಗಳಲ್ಲಿ ವರ್ಣದ್ವೇಷ ಬೆಳೆದು ಪರಸ್ಪರ ವೈರತ್ವವನ್ನು ಬೆಳೆಯಿಸಿಕೊಳ್ಳುವಂತಾಯಿತು. ಜರ್ಮನ್ ದೇಶದಲ್ಲಿ ಹಿಟ್ಲರನ ಆಳಿಕೆಯಿದ್ದಾಗ ವರ್ಣಭೇದ ಮತ್ತು ಜನಾಂಗ ಭೇದಗಳ ಕೃತಿಗಳು ಕೊನೆಯ ಮಟ್ಟಕ್ಕೆ ಮುಟ್ಟಿದವು. ಶ್ವೇತ ವರ್ಣೀಯ ಜನಾಂಗಗಳಲ್ಲಿ ಜರ್ಮನರು ಶ್ರೇಷ್ಠ ನಾಗರೀಕರೆಂದೂ, ಶ್ರೇಷ್ಠ ಸಂಸ್ಕೃತಿಯುಳ್ಳವರೆಂದೂ ಉಳಿದವರನ್ನು ಸುಸಂಸ್ಕೃತರನ್ನಾಗಿ ಮಾಡಲು ಮಾರ್ಗದರ್ಶನ ನೀಡುವವರೆಂದೂ ಆದ್ದರಿಂದ ಎಲ್ಲರನ್ನೂ ತಮ್ಮ ಅಧಿಪತ್ಯಕ್ಕೆ ಒಳಪಡಿಸಿಕೊಳ್ಳಬೇಕೆಂದೂ ಪಣ ತೊಟ್ಟರು. ಇವಲ್ಲದೆ ತಮ್ಮ ಶರೀರದಲ್ಲಿ ಹರಿಯುತ್ತಿರುವ ರಕ್ತವು ಪರಿಶುದ್ಧವಾದುದೆಂದೂ ನಂಬಿಗೆಯುಳ್ಳವರಾಗಿದ್ದರು. ಬೇರೆ ಜನಾಂಗದೊಡನೆ ವಿವಾಹ ವಾಗಲು ಮತ್ತು ಅವರೊಡನೆ ಸರಿಸಮಾನರೆಂದು ವ್ಯವಹರಿಸಲು ನಿರಾಕರಿಸಿದರು. ಎರಡನೆಯ ಮಹಾಯುದ್ಧದ ಅನೇಕ ಕಾರಣಗಳಲ್ಲಿ ಇದೊಂದು ಮುಖ್ಯ ಕಾರಣವೆಂದು ಹೇಳುತ್ತಾರೆ.

ಇತರ ಶ್ವೇತವರ್ಣೀಯ ಜನಾಂಗಗಳನ್ನು ಅವರ ಮಾತುಗಳು ರೊಚ್ಚಿಗೆಬ್ಬಿಸಿದವು. ಅನೇಕ ಜ್ಞಾನಿಗಳು, ವಿಜ್ಞಾನಿಗಳು ವೈಜ್ಞಾನಿಕ ದೃಷ್ಟಿಯಿಂದ ಅವರ ವಿಚಾರಗಳನ್ನು ವಿಚಾರಣೆಗೆ ಗುರಿಪಡಿಸಿದರು. ಯುನೆಸ್ಕೊ (*UNESCO*) ಕೂಡ ಎಶ್ಲೀ ಮೊಂಟೆಗೊ ಎಂಬ ಮಾನವ ವಿಜ್ಞಾನಿಯನ್ನು ಸುಮಾರು ೧೫ ವರ್ಷಗಳ ಹಿಂದೆಯೇ ಇಂತಹ ವಿಚಾರಗಳನ್ನು ಪರಿಶೀಲಿಸುವ

ತಜ್ಞರ ತಂಡದ ಅಧ್ಯಕ್ಷನನ್ನಾಗಿ ಮಾಡಿತ್ತು. ಆ ಎಲ್ಲ ವಿಜ್ಞಾನಿಗಳು ಬಹು ಜಾಗರೂಕತೆಯಿಂದ, ವೈಜ್ಞಾನಿಕ ರೀತಿಗಳಿಂದ ಎಲ್ಲ ವಿಷಯುಗಳ ಬಗ್ಗೆ ಶೋಧ ನಡೆಯಿಸಿ ತಮ್ಮ ನಿರ್ಣಯಗಳನ್ನು ಯುನೆಸ್ಕೋ (UNESCO) ಕ್ಕೆ ಸಾದರ ಪಡಿಸಿದರು. ಆ ನಿರ್ಣಯುಗಳಲ್ಲಿ ಮುಖ್ಯವಾದ ಅಂಶಗಳೆಂದರೆ ಶ್ರೇಷ್ಠ ಮತ್ತು ಪರಿಶುದ್ಧ ರಕ್ತವುಳ್ಳ ಜನಾಂಗಗಳು ಪ್ರಪಂಚದಲ್ಲಿ ಇಲ್ಲವೇ ಇಲ್ಲ. ಮತ್ತು ಪರಿಶುದ್ಧವಾದ ಜನಾಂಗವೂ ಇಲ್ಲ. ಜರ್ಮನ್‌ರ ರಕ್ತದಲ್ಲಿದ್ದ ಅಂಶಗಳನ್ನು ನಿಗ್ರೋ ಜನರಲ್ಲಿಯೂ ಕೂಡ ಕಂಡು ಹಿಡಿಯುಲಾಯಿತು. ಮತ್ತು ನಿಗ್ರೋ ಜನಾಂಗಗಳಲ್ಲಿನ ರಕ್ತದ ಅಂಶಗಳು ಜರ್ಮನ್‌ರಲ್ಲಿಯೂ ಇವೆ ಎಂಬುದನ್ನು ಶಾಸ್ತ್ರೀಯುವಾಗಿ ಕಂಡು ಹಿಡಿಯುಲಾಯಿತು. ಇದಲ್ಲದೆ ಜರ್ಮನ್‌ರು ಯುದ್ಧದಲ್ಲಿ ಸೋತದ್ದು ಅವರ ಶ್ರೇಷ್ಠತ್ವಕ್ಕೆ ಕೊಡಲಿಪೆಟ್ಟು ಹಾಕಿದಂತಾಯಿತು. ಇಂದು ಮಾನವ ಶಾಸ್ತ್ರವು ಎಲ್ಲ ಜನಾಂಗಗಳೂ ಮಾನವ ಜಾತಿಗೆ ಸೇರಿದ್ದವೆಂದೂ, ಅವುಗಳಲ್ಲಿ ಕಂಡು ಬರುವ ವೈವಿಧ್ಯತೆಗೆ ವಾತಾವರಣ ಮತ್ತು ಇನ್ನಿತರ ಆನುವಂಶಿಕತೆಗಳೇ ಕಾರಣಗಳೆಂದು ಪ್ರತಿಪಾದಿಸುವಲ್ಲಿ ಯಾವ ಹುರುಳೂ ಇಲ್ಲವೆಂದೂ ತಿಳಿಸುವುದನ್ನು ಎಲ್ಲರೂ ಒಪ್ಪಲೇಬೇಕು. ಈ ರೀತಿ ಎಲ್ಲರೂ ಮಾನವರೇ ಎಂಬುದನ್ನು ಶಾಸ್ತ್ರೀಯುವಾಗಿ ತಿಳಿಸಿ ಹೇಳಿದ ಮಾನವ ಶಾಸ್ತ್ರವು ಮೇಲು ಕೀಳು ಎಂಬ ಭಾವನೆಯುನ್ನು ಹೋಗಲಾಡಿಸಲು ಪ್ರಚೋದನೆ ಕೊಟ್ಟಿತು. ಇಷ್ಟಾದರೂ ಸಹ, ಅಮೇರಿಕೆಯುಲ್ಲಿ ಆಗಾಗ್ಗೆ ತೋರಿ ಬರುತ್ತಿರುವ ವರ್ಣದ್ವೇಷದ ಪ್ರಸಂಗಗಳು ಮತ್ತು

ದಕ್ಷಿಣ ಆಫ್ರಿಕೆಯಲ್ಲಿನ ಬಿಳಿಯ ಜನರು ಕಪ್ಪು ಜನರ ಬಗ್ಗೆ ತಳೆದಿರುವ ಧೋರಣೆಯು ಮಾನವ ಕುಲಕ್ಕೆ ಕಲಂಕ ತರುವಂತಹದಾಗಿದೆ. ಈ ವಿಷಯಕ್ಕೆ ರಾಜಕೀಯ ಧುರೀಣರ ಕುತಂತ್ರ ಕಾರಣವೇ ಹೊರತು ಯಾವ ವೈಜ್ಞಾನಿಕ ಆಧಾರವೂ ಇಲ್ಲ.

೨೦ ನೇ ಶತಮಾನದಲ್ಲಿ ಆಧುನಿಕ ಮಾನವ ಸಮಾಜದಲ್ಲಿ ಅನೇಕ ಕಡೆಗಳಲ್ಲಿ ಇನ್ನೂ ೧೯ ನೇ ಶತಮಾನದ ಯುರೋಪದ ವಿಚಾರಗಳು ಬಳಕೆಯಲ್ಲಿವೆ. ಇದು ಬಹಳ ವಿಷಾದಕರವಾದದ್ದು. ಆ ವಿಚಾರಗಳೆಂದರೆ ಒಂದು ಸಂಸ್ಕೃತಿಯನ್ನು ಮತ್ತೊಂದು ಸಂಸ್ಕೃತಿಯ ಜೊತೆಗೆ ಹೋಲಿಸಿ, ಒಂದು ಕೀಳು, ಮತ್ತೊಂದು ಶ್ರೇಷ್ಠವೆಂದು ಪರಿಗಣಿಸುವದೇ ಆಗಿದೆ. ತಾಂತ್ರಿಕತೆಗಳಲ್ಲಿ (*Technology*) ಹಿಂದುಳಿದ ಜನಾಂಗಗಳು ಸಂಸ್ಕೃತಿ ರಹಿತವೆಂದೂ ಮತ್ತು ಕೀಳು ಮಟ್ಟದ ಜೀವನವನ್ನು ಸಾಗಿಸುವರೆಂದೂ ಹೇಳಲಾಗಿತ್ತು. ಇಂಥ ವಿಚಾರಗಳು ಒಂದು ಸಮಾಜದಲ್ಲಿರುವ ಜನರನ್ನು ಮತ್ತೊಂದು ಸಮಾಜದಲ್ಲಿದ್ದ ಜನರು ಹೊಗಳುವದು ಮತ್ತು ತೆಗಳುವುದಕ್ಕೆ ಎಡೆಮಾಡಿ ಕೊಟ್ಟಿತು. ಪಾಶ್ಚಾತ್ಯ ರಾಷ್ಟ್ರಗಳು ಜಗತ್ತಿನ ಅನ್ಯರಾಷ್ಟ್ರಗಳ ಜನರ ಜೀವನವನ್ನು ಬಹಳ ಕೀಳುಮಟ್ಟದ್ದೆಂದು ಮತ್ತು ಅಂಥ ಶ್ರದ್ಧೆಯಿಂದ ಕೂಡಿದ್ದಾಗಿದೆ ಎಂದು ಅಭಿಪ್ರಾಯಪಟ್ಟವರಾಗಿದ್ದರು.

ಮಾನವ ಶಾಸ್ತ್ರಜ್ಞರು ಸಂಸ್ಕೃತಿಯ ಅಧ್ಯಯನವನ್ನೇ ತಮ್ಮ ಗುರಿಯನ್ನಾಗಿಟ್ಟುಕೊಂಡು ಪ್ರಪಂಚದ ಸಾವಿರಾರು ಸಮಾಜ

ಗಳ ಜನಜೀವನದ ಪರಿಚಯ ಮಾಡಿಕೊಳ್ಳುವುದರಲ್ಲಿ ಯಶಸ್ಸು ಹೊಂದಿದ್ದರು. ಅವರು ಆಳವಾದ ಮತ್ತು ದೀರ್ಘ ಕಾಲೀನ ಅಧ್ಯಯನದಿಂದ ಸಂಸ್ಕೃತಿ ಎಂಬ ಪದದ ಅರ್ಥವನ್ನೇ ಬದಲಾಯಿಸಿದರು. ಅದಕ್ಕೆ ಹೊಸರೂಪ ಕೊಟ್ಟರು. ಆಗ ಬೇರೆ ವಿಧದಲ್ಲಿ ಆ ಶಬ್ದದ ಬಳಕೆ ಪ್ರಾರಂಭವಾಯಿತು. ಅವರ ಅಧ್ಯಯನಗಳಲ್ಲಿ ಬೆಳಕಿಗೆ ಬಂದ ಮುಖ್ಯ ವಿಷಯಗಳೆಂದರೆ: ಪ್ರತಿಯೊಂದು ಸಂಸ್ಕೃತಿಯು ತನ್ನದೇ ಆದ ಹಿನ್ನೆಲೆಯಲ್ಲಿ ಪ್ರಗತಿ ಹೊಂದುತ್ತಲಿದೆ. ಅದು ತನ್ನದೇ ಆದ ಮೌಲ್ಯಗಳ ಮೇಲೆ ಅವಲಂಬಿಸಿರುತ್ತದೆ ಆದ್ದರಿಂದ ಅನ್ಯರ ಸಂಸ್ಕೃತಿಯನ್ನು ನಮ್ಮ ಸಂಸ್ಕೃತಿಯ ಮೌಲ್ಯದಿಂದ ನೋಡಿದರೆ ತಪ್ಪು. ಇನ್ನೊಬ್ಬರ ಸಂಸ್ಕೃತಿ ಕೀಳು ಎನ್ನುವದರಲ್ಲಿ ಅದು ನಮ್ಮ ಸಂಸ್ಕೃತಿಯಂತೆ ಇಲ್ಲ ವೆಂದಷ್ಟೆ ಹೇಳಬಹುದಲ್ಲದೆ ಅದಕ್ಕಿಂತ ಹೆಚ್ಚಿನದೇನಲ್ಲ. ಒಂದು ಸಮಾಜದಲ್ಲಿನ ವಿಚಾರಗಳು, ಮೌಲ್ಯಗಳು, ರೂಢಿ-ನಿಯಮ ಗಳು, ಆದರ್ಶಗಳು ಮತ್ತೊಂದು ಸಮಾಜದಿಂದ ಭಿನ್ನವಾಗಿರು ವದು ಸಹಜ. ಪ್ರತಿಯೊಂದು ಸಮಾಜಕ್ಕೆ ತನ್ನ ಸಂಸ್ಕೃತಿಯ ಬಗ್ಗೆ ಆದರವಿದ್ದೇ ಇರುವದು. ನಾವು ಹೇಗೆ ನಮ್ಮ ಸಂಸ್ಕೃತಿಯ ಬಗ್ಗೆ ಹೇಳುತ್ತೇವೆಯೋ ಅದರಂತೆ ಅವರೂ ಸಹ ವರ್ತಿಸು ವದರಲ್ಲಿ ಯಾವ ತಪ್ಪೂ ಇಲ್ಲ. ಸಂಸ್ಕೃತಿಗಳಲ್ಲಿ ಮೇಲು ಕೀಳು ಎಂಬ ಭೇದಗಳಿಲ್ಲ. ಎಲ್ಲ ಸಂಸ್ಕೃತಿಗಳು ಅವರವರ ಜೀವ ನಕ್ಕೆ ಅಷ್ಟೇ ಮಹತ್ವದ್ದಾಗಿವೆ. ಒಬ್ಬರ ಸಂಪ್ರದಾಯಗಳನ್ನು ಇನ್ನೊಬ್ಬರು ದೂಷಿಸುವದು ಸಮಂಜಸವಲ್ಲ. ಈ ರೀತಿ ಪ್ರತಿ ಯೊಂದು ಸಮಾಜವು ತಿಳಿದುಕೊಂಡು ಅನ್ಯರ ಬಗ್ಗೆ ಆದರ

ಮತ್ತು ಗೌರವಗಳನ್ನೂ ಹೊಂದುವದು ಅವಶ್ಯ. ಇದರಿಂದ ಪರಸ್ಪರ ಸ್ನೇಹಭಾವ, ಸಹನಶೀಲತೆಗಳು ಬೆಳೆದು ಒಬ್ಬರನ್ನೊಬ್ಬರು ಒಳ್ಳೇ ರೀತಿಯಲ್ಲಿ ತಿಳಿದುಕೊಳ್ಳಲು ಅನುಕೂಲವಾಗುತ್ತದೆ. ಸಂಸ್ಕೃತಿಗಳ ವೈವಿಧ್ಯತೆಯ ಅರಿವು ಮನುಷ್ಯನಲ್ಲಿ ಇನ್ನೊಬ್ಬರ ಜೀವನದ ಬಗ್ಗೆ ತಿರಸ್ಕಾರ ಭಾವವನ್ನು ಜಾಗ್ರತಗೊಳಿಸುವದಲ್ಲ; ಆದರ ಹುಟ್ಟಿಸುವುದಾಗಿದೆ.

ಔದ್ಯೋಗಿಕ ಕ್ರಾಂತಿ, ಸಾರಿಗೆ, ಸೌಕರ್ಯಗಳ ಸಾಧನೆಗಳಲ್ಲಿ ಆದ ಪ್ರಗತಿ ಮತ್ತು ಸಂಪರ್ಕ ಸಾಧನೆಗಳ್ಲಾದ ಪ್ರಗತಿಗಳಿಂದ ಪ್ರಪಂಚದ ವಿಶಾಲತೆಯು ಆಕುಂಚನಗೊಂಡಿದೆ. ಇಂದು ಎಲ್ಲ ರಾಷ್ಟ್ರಗಳು ಅನೇಕ ವಿಧಗಳಲ್ಲಿ ಪರಸ್ಪರ ಸಹಕಾರವನ್ನು ನೀಡುತ್ತಿರುವದನ್ನು ನಾವು ನೋಡುತ್ತೇವೆ. ಮೊದಲಿನ ಯುಗದಲ್ಲಿ ಪರಸ್ಪರರ ಸಂಪರ್ಕಗಳಿದ್ದರೂ ಈ ರೀತಿ ಪರಸ್ಪರ ಅವಲಂಬನೆ ಕಂಡು ಬರುತ್ತಿರಲಿಲ್ಲ. ಇಂದು ನಮಗೆ ಪ್ರಪಂಚವು ಚಿಕ್ಕದೆಂದು ಕಾಣುವದು. ಮಾನವನು ಗ್ರಹಗಳ ಅನ್ವೇಷಣೆಗೆ ಹಾತೊರೆಯುತ್ತಿರುವದನ್ನು ಗಮನಿಸಿದರೆ ವಿಜ್ಞಾನವು ಎಷ್ಟರ ಮಟ್ಟಿಗೆ ಪ್ರಗತಿ ಹೊಂದಿದೆ ಎಂಬುದನ್ನು ತಿಳಿಯಬಹುದು.

ಇಂತಹ ವಾತಾವರಣದಲ್ಲಿ ವಾಸಿಸುತ್ತಿರುವ ಮಾನವನು ಇಂದು ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಅವನ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಮತ್ತು ಸಾಮಾಜಿಕ ಜೀವನದಲ್ಲಿ ಒಂದು ಹೊಯ್ದಾಟ ಕಾಣಿಸುವದು. ಹಳೆಯ ಮತ್ತು ಹೊಸ ವಿಚಾರಗಳಲ್ಲಿ ಮತ್ತು ಮೌಲ್ಯಗಳಲ್ಲಿ ನಿಕರ

ವಾದ ಸಂಘರ್ಷವನ್ನು ಕಾಣಬಹುದಾಗಿದೆ. ಉದಾಹರಣೆಗಾಗಿ ಪಾಶ್ಚಿಮಾತ್ಯರ ಜೀವನ ಮೌಲ್ಯಗಳು ಮತ್ತು ಇತರ ಜನಾಂಗ ಗಳ ಮೌಲ್ಯಗಳ ನಡುವೆ ಇಂದಿಗೂ ಸಹ ಸಂಘರ್ಷಣೆ ನಡೆದೇ ಇದೆ. ಪಾಶ್ಚಿಮಾತ್ಯ ಪ್ರಭಾವಕ್ಕೆ ಒಳಪಟ್ಟ ನೂರಾರು ಸಮಾಜ ಗಳಲ್ಲಿ ಈ ದ್ವಂದ್ವಯುದ್ಧ ಒಂದಿಲ್ಲ ಒಂದು ರೀತಿಯಲ್ಲಿ ಕಾಣ ಸಿಗುತ್ತದೆ. ಮಾನವ ಶಾಸ್ತ್ರವು ಇಂಥ ಸನ್ನಿವೇಶಗಳ ಅಧ್ಯಯನ ಕಾರ್ಯವನ್ನು ಸುಮಾರು ಐವತ್ತು ವರ್ಷಗಳಿಂದ ಮಾಡುತ್ತ ಬಂದಿದೆ. ಒಂದು ಸಂಸ್ಕೃತಿಯು ಮೇಲೆ ಇನ್ನೊಂದು ಸಂಸ್ಕೃ ತಿಯು ತನ್ನ ಅಧಿಕಾರವನ್ನು ನಡೆಯಿಸುವುದು ಅಹಿತಕರ. ಉದಾಹರಣೆಗಾಗಿ— ಆದಿವಾಸಿಗಳ ಸಾಂಸ್ಕೃತಿಕ ಮೌಲ್ಯಗಳಲ್ಲಿ ಬದಲಾವಣೆ ತರುವ ಪ್ರಯತ್ನಗಳು ಹಲವು ಸಮಸ್ಯೆಗಳನ್ನೇ ತಂದೊಡ್ಡುವವು. ಆದ್ದರಿಂದ ಬದಲಾವಣೆಯ ಕಾರ್ಯ ಕ್ರಮವನ್ನು ಒತ್ತಾಯದಿಂದ ಮತ್ತೊಂದು ಸಮಾಜದ ಮೇಲೆ ಹೇರಬಾರದು ಎಂಬುದೇ ಮಾನವಶಾಸ್ತ್ರಜ್ಞರ ಅಭಿಪ್ರಾಯ ವಾಗಿದೆ. ಇದಲ್ಲದೆ ಇಂದು ಅಭಿವೃದ್ಧಿ ಹೊಂದುತ್ತಲಿರುವ ರಾಷ್ಟ್ರಗಳಲ್ಲಿ ಅನೇಕ ಸಮಸ್ಯೆಗಳು ಉದ್ಭವಿಸುವದು ಸಹಜವಾದ ವಿಷಯ. ಆದರೆ ಅವುಗಳ ಶಾಸ್ತ್ರೀಯವಾದ ಅಭ್ಯಾಸ ಮಾಡಿ ಅವುಗಳಲ್ಲಿದ್ದ ತಥ್ಯವನ್ನು ಜನರೆದುರಿಗೆ ಇಡುವದು ಅತ್ಯವಶ್ಯ. ಈ ಹೊಣೆಯನ್ನು ಮಾನವಶಾಸ್ತ್ರವು ಬಹು ಸಮರ್ಥ ರೀತಿ ಯಿಂದ ನಿರ್ವಹಿಸಬಹುದು.

ಮಾನವ ಶಾಸ್ತ್ರವು ಸಾಧಿಸಿದ ಮಹತ್ಕಾರ್ಯಗಳು ಸಾಂಸ್ಕೃತಿಕ, ಸಾಮಾಜಿಕ ಕ್ಷೇತ್ರಗಳಿಗಷ್ಟೇ ಅನ್ವಯಿಸದೆ ಮಾನ

ವನ ಶಾರೀರಿಕ ಉತ್ಕ್ರಾಂತಿಯ ಬಗ್ಗೆ ಸರಿಯಾದ ಮತ್ತು ವೈಜ್ಞಾನಿಕವಾದ ವಿವರಣೆಯನ್ನು ನೀಡುವದರಲ್ಲಿ ಅವು ಯಶಸ್ವಿಯಾಗಿವೆ. ಚಾರ್ಲಸ್ ಡಾರ್ವಿನ್‌ನ ಜೀವ್ರೋತ್ಕ್ರಾಂತಿಯ ಸ್ವರೂಪ ಮತ್ತು ಉಂಟಾದ ಬದಲಾವಣೆಗಳು ಹತ್ತೊಂಭತ್ತನೆಯ ಶತಮಾನದಲ್ಲಿ ಬೆಳಕಿಗೆ ಬರುವ ಮೊದಲು ಮಾನವನಿಗೆ ಅದರ ಬಗ್ಗೆ ಸರಿಯಾದ ಜ್ಞಾನ ಇರಲಿಲ್ಲ. ಜೀವನ ಉತ್ಪತ್ತಿ ಮತ್ತು ಮಾನವನ ಉತ್ಪತ್ತಿ ಭೂಮಿಯ ಮೇಲೆ ಹೇಗೆ ಆಯಿತು ಎನ್ನುವದನ್ನು ತಿಳಿದುಕೊಳ್ಳಬೇಕೆಂಬ ಜಿಜ್ಞಾಸೆಯು ಧರ್ಮ ಪ್ರಚಾರಕರ ಸಮಾಧಾನಗಳಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗುತ್ತಿತ್ತು. ಅವರ ವಾದದ ಪ್ರಕಾರ ಜೀವದ ಉತ್ಪತ್ತಿ ಮತ್ತು ಮಾನವನ ಉತ್ಪತ್ತಿಯು ಭಗವಂತನಿಂದ ನಡೆಯಿತೆಂದು ಜನಸಾಮಾನ್ಯರಿಗೆ ಬೋಧಿಸಲಾಗುತ್ತಿತ್ತು. ಭಗವಂತನು ಮಾನವನನ್ನು ನಿರ್ಮಿಸಿದ ವಿಧಾನವನ್ನು ಆಯಾ ಧರ್ಮಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಹೇಳಲಾಗಿದೆ. ಹಿಂದೂ ಧರ್ಮದಲ್ಲಿ ಮಾನವನು ಪಂಚ ಭೂತಗಳಿಂದ ನಿರ್ಮಿತವಾಗಿದ್ದಾನೆ. ಮತ್ತು ಅನ್ಯ ಜೀವರಾಶಿಗಳಿಗಿಂತ ಶ್ರೇಷ್ಠನಾಗಿದ್ದಾನೆ. ಆದ್ದರಿಂದ ಅವನು ಇತರ ಪ್ರಾಣಿ ಪ್ರಪಂಚದಿಂದ ಪ್ರತ್ಯೇಕವಾಗಿದ್ದಾನೆ. ಕ್ರಿಶ್ಚಿಯನ್ ಧರ್ಮದ ಅನುಯಾಯಿಗಳು ಮಾನವ ಸಮಾಜದ ಉತ್ಪತ್ತಿಯು ಬೇರೆ ವಿಧದಿಂದ ನಡೆದಿದೆ ಎಂದು ನಂಬಿಗೆಯುಳ್ಳವರಾಗಿದ್ದಾರೆ. ಭಗವಂತನು ಮೊದಲು ಆಡಮ್ ಮತ್ತು ಈವ್‌ರನ್ನು ಸೃಷ್ಟಿಸಿ ಅವರನ್ನು ಈಡನ್ ಎಂಬ ತೋಟದಲ್ಲಿ ಸುಖವಾಗಿ ಕಾಲ ಕಳೆಯಿರಿ ಎಂದು

ಆಶೀರ್ವದಿಸಿ ಕಳುಹಿಸುವಾಗ ಅವರಿಗೆ ಆ ತೋಟದಲ್ಲಿದ್ದ ಹಣ್ಣುಗಳನ್ನು ಸೇವಿಸಬಾರದೆಂದು ಎಚ್ಚರಿಕೆ ಕೊಡುತ್ತಾನೆ ಇವರೀರ್ವರು ಕೆಲಕಾಲ ಸುಖದಿಂದ ಜೀವನ ಸಾಗಿಸಿದರು. ಆದರೆ ಅವರು ತೋಟದಲ್ಲಿದ್ದ ಹಣ್ಣುಗಳಿಂದ ಆಕರ್ಷಿತರಾಗಿ ಭಗವಂತನ ಆದೇಶವನ್ನು ಪಾಲಿಸದೇ ಹೋದರು. ಇದರಿಂದ ಕುಪಿತನಾದ ಭಗವಂತನು ಅವರಿಗೆ ಪೃಥ್ವಿಯ ಮೇಲೆ ಬಾಳಿರಿ ಎಂದು ಶಾಪವಿತ್ತನು. ಅಂದಿನಿಂದ ಪೃಥ್ವಿಯ ಮೇಲೆ ಮಾನವ ವಂಶದ ಉತ್ಪತ್ತಿಯಾಯಿತು, ಇಂದು ನಾವೆಲ್ಲರೂ ಅವರ ಸಂತಾನಗಳು ಎಂದು ಕ್ರೈಸ್ತ ಮತ ಸಾರುತ್ತಿದೆ. ಇದೇ ರೀತಿ ಬೇರೆ ಬೇರೆ ಧರ್ಮಗಳು ಮತ್ತು ಪಂಗಡದವರು ಮಾನವನ ಉತ್ಪತ್ತಿಯ ಬಗ್ಗೆ ವಿವಿಧವಾದ ವಿಚಾರಗಳನ್ನು ಹೊಂದಿದ್ದಾರೆ.

ಮಾನವ ಶಾಸ್ತ್ರದ ಅಭ್ಯುದಯಕ್ಕಿಂತ ಮೊದಲು ಮೇಲ್ಕಂಡ ವಿವರಣೆಗಳು ಮಾತ್ರ ಲಭ್ಯವಿದ್ದವು. ಅವುಗಳನ್ನೇ ಪ್ರಪಂಚದಲ್ಲಿ ವಾಸ ಮಾಡುತ್ತಿದ್ದ ಜನಕೋಟಿಗಳು ನಂಬಿದ್ದವು. ಈ ತೆರನಾದ ಅಭಿಪ್ರಾಯಗಳು ಜಗತ್ತಿನ ಎಲ್ಲ ಸಮಸ್ತ ರಹವಾಸಿಗಳಿಗೆ ಸಮ್ಮತವಾಗಿರದೇ ಬೇರೆ ಬೇರೆ ಗುಂಪುಗಳಲ್ಲಿ ಮಾತ್ರ ಮಾನ್ಯತೆ ಪಡೆದಿದ್ದವು. ಆದ್ದರಿಂದ ಪ್ರತಿಯೊಂದು ಪ್ರಮುಖ ಜನಾಂಗದವರೂ ತಾವೇ ಮೂಲ ಮಾನವರೆಂದು ಪ್ರತಿಪಾದಿಸಿಕೊಳ್ಳತೊಡಗಿತು. ಅನೇಕ ಆದಿವಾಸಿ ಸಮಾಜಗಳಲ್ಲಿಯೂ ಈ ರೀತಿಯ ಅಭಿಪ್ರಾಯಗಳಿರುವದನ್ನು ನಾವು ಕಾಣಬಹುದಾಗಿದೆ. ಇಂಥ ವಿವರಗಳು ವೈಜ್ಞಾನಿಕವಾಗಿ ಮಾನವನ

ಜ್ಞಾನ ಬೆಳೆಯಲು ಅಡ್ಡಿಯಾದವೆಂದರೆ ಅತಿಶಯೋಕ್ತಿಯಾಗ ಲಾರದು. ವಿಮರ್ಶಾತ್ಮಕ ವಿಚಾರ ಪ್ರಣಾಲಿಗೆ ಇವು ಬಾಧೆ ಯನ್ನು ತಂದೊಡ್ಡಿದವು.

ಹದಿನೆಂಟನೆಯ ಶತಮಾನದಲ್ಲಿ ಮತ್ತು ಈಚಿಗೆ ಮೇಧಾವಿಗಳು ಮತ್ತು ವೈಜ್ಞಾನಿಕ ಪ್ರವೃತ್ತಿಯುಳ್ಳ ವ್ಯಕ್ತಿ ಗಳು ನಿಧಾನವಾಗಿ ತಮ್ಮ ಹೊಸ ಮತ್ತು ಕ್ರಾಂತಿಕಾರಕ ವಿಚಾರಗಳನ್ನು ಸಮಾಜದೆದುರು ಇಡಲು ಹಿಂಜರಿಯಲ್ಲಿಲ್ಲ. ನಾನಾ ರೀತಿಯ ಕಷ್ಟ ಕಾರ್ಪಣ್ಯ ಮತ್ತು ಹಲವು ಸಲ ಚಿತ್ರ ಹಿಂಸೆಗೊಳಗಾದರೂ ಅವರು ತಾವು ಕಂಡ ಸತ್ಯಾಂಶಗಳನ್ನು ಮತ್ತಷ್ಟು ರಭಸದಿಂದ ಪ್ರಚಾರ ಮಾಡಿದರು. ೧೮೫೯ ರಲ್ಲಿ ಚಾರ್ಲಸ್ ಡಾರ್ವಿನ್‌ನೆಂಬ ವಿಜ್ಞಾನಿಯು ಜೀವದ ಉದ್ಭವ ಮತ್ತು ಅದು ಉತ್ಕ್ರಾಂತಿಗೊಂಡ ಬಗೆಯನ್ನು ಕೂಲಂಕಷ ವಾಗಿ ವಿವರಿಸಿದನು. ಇದಲ್ಲದೇ ಉತ್ಕ್ರಾಂತಿಯ ಪ್ರಕ್ರಿಯೆ ಯಲ್ಲಿ ಕಾರ್ಯಾನ್ವಿತವಾದ ಸಿದ್ಧಾಂತಗಳನ್ನು ವಿವರಿಸಿದನು. ಇದರ ಉತ್ಕ್ರಾಂತಿಯಲ್ಲಿ ಮಾನವನ ಸ್ಥಾನವನ್ನು ವಿವರಿ ಸಿದನು. ಅವನ ಅಭಿಪ್ರಾಯದಂತೆ ಮಾನವನು ಜೀವಿಯು ಉತ್ಕ್ರಾಂತಿಯಲ್ಲಿ ಅತಿಶ್ರೇಷ್ಠವಾದ ಸ್ಥಾನವನ್ನು ಆಕ್ರಮಿಸಿ ದ್ದಾನೆ. ಇವನ ವಂಶವು ಕಪಿಗಳ ವಂಶದಿಂದ ಅಭಿವೃದ್ಧಿ ಹೊಂದಿದೆ ಎಂದು ಹೇಳಿದ್ದಾನೆ.

ಧರ್ಮ ಪ್ರಚಾರಕರು ಸಾವಿರಾರು ವರ್ಷಗಳಿಂದ ಜನ ರಿಗೆ ಬೋಧಿಸಿದ ವಿಚಾರಗಳು ಡಾರ್ವಿನ್‌ನ ವಿಚಾರಗಳಿಗೆ

ವ್ಯತಿರಿಕ್ತವಾಗಿದ್ದವು. ಆದ್ದರಿಂದ ಧರ್ಮ ಪ್ರಚಾರಕರು ಇಂತಹ ವಿಚಾರಗಳಿಂದ ಉದ್ರೇಕಗೊಂಡು ವಿಜ್ಞಾನಿಗಳನ್ನು ಧರ್ಮ ಭ್ರಷ್ಟರೆಂದು ಅವರನ್ನು ಅವಮಾನಗೊಳಿಸಲು ತಮ್ಮ ಎಲ್ಲ ಶಕ್ತಿಗಳನ್ನು ಕ್ರೋಢೀಕರಿಸಿದರು. ಧರ್ಮದ ನೆವದಿಂದ ವಿಜ್ಞಾನದ ಬೆಳವಣಿಗೆಗೆ ಅಡ್ಡಿ ಆತಂಕಗಳನ್ನು ತರಲು ಪ್ರಯತ್ನ ಮಾಡಿದರು. ಆದರೆ ವೈಜ್ಞಾನಿಕ ಪ್ರವೃತ್ತಿಯು ಅವರೆಲ್ಲರ ಜೀವವಾಗಿ ಪರಿಣಮಿಸಿದ್ದರಿಂದ ಧರ್ಮ ಪ್ರಚಾರಕರ ಎಲ್ಲ ತೊಂದರೆಗಳನ್ನು ಧೈರ್ಯದಿಂದ ಎದುರಿಸಿ ವಿಜ್ಞಾನದ ಬಗ್ಗೆ ಜನರಲ್ಲಿ ಆಸಕ್ತಿಯನ್ನು ಹುಟ್ಟಿಸುವದರಲ್ಲಿ ಯಶಸ್ವಿಯಾದರು. ಮಾನವ ವಂಶದ ಅಭ್ಯುದಯವು ಜೀವಿಯ ಉತ್ಕ್ರಾಂತಿಯಲ್ಲಿ ನಡೆದಿದೆ ಮತ್ತು ಅವನು ಪ್ರಾಣಿವರ್ಗಗಳ ಗುಂಪಿಗೆ ಸೇರಿದವನು ಎಂದು ಉತ್ಕ್ರಾಂತಿವಾದಿಗಳು ಪ್ರತಿಪಾದಿಸಿದರು.

ಮಾನವನು ಭಗವಂತನಿಂದ ಪ್ರತ್ಯೇಕವಾಗಿ ರಚಿಸಲ್ಪಟ್ಟವನೆಂಬ ಧಾರ್ಮಿಕ ಭಾವನೆಗಳು ಸಂಶಯಾಸ್ಪದವಾಗಿ ಕಂಡುಬರತೊಡಗಿದವು. ಮತ್ತು ಅವುಗಳು ಅಂಧ ಶ್ರದ್ಧೆಯ ಮೂಲಕ ಸಾವಿರಾರು ವರ್ಷಗಳಿಂದ ಜನರಲ್ಲಿ ಮನೆಮಾಡಿಕೊಂಡಿವೆ ಎಂಬುದನ್ನು ಪಂಡಿತರು ಇಂದು ಒಪ್ಪಿಕೊಂಡಿದ್ದಾರೆ. ಇಂದು ಮಾನವನು ಜೀವಿಯ ಉತ್ಕ್ರಾಂತಿಯಲ್ಲಿ ರೂಪ ತಾಳಿದ್ದಾನೆ. ಆದ್ದರಿಂದ ಅವನು ಪ್ರಾಣಿವರ್ಗದ ಪ್ರಪಂಚಕ್ಕೆ ಸೇರಿದವನಿದ್ದಾನೆ ಎಂದು ಸಾಧಾರಣವಾಗಿ ಮತ್ತು ವೈಜ್ಞಾನಿಕವಾಗಿ ಒಪ್ಪಿಕೊಳ್ಳಲಾಗಿದೆ. ಕಳೆದ ಒಂದು ಶತಮಾನದಲ್ಲಿ ನೂರಾರು

ಜನ ವಿಜ್ಞಾನಿಗಳು ಮಾನವ ಉತ್ಕ್ರಾಂತಿಯ ವಿವಿಧ ಹಂತಗಳನ್ನು ಕಂಡುಕೊಳ್ಳಲು ಶ್ರಮ ವಹಿಸಿರುವದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಪ್ರಾಚ್ಯವಸ್ತು ಸಂಶೋಧನ ಇಲಾಖೆಯಲ್ಲಿ ಕೆಲಸ ಮಾಡುವವರೂ ಮತ್ತು ವೈಯಕ್ತಿಕವಾಗಿ ಶೋಧ ಕಾರ್ಯವನ್ನು ಕೈಕೊಂಡವರೂ ಒಟ್ಟುಗೂಡಿ ಮಾನವ ಪ್ರಕಾರಗಳನ್ನು ಶೋಧಿಸಿ ಅವುಗಳನ್ನು ಕಾಲಕ್ರಮವಾಗಿ ವಿಂಗಡಿಸಿದ್ದಾರೆ. ಜಾವಾ – ಮಾನವ, ಪೇಕಿಂಗ ಮಾನವ, ನಿಯಾಂಡಥೆಲ್ ಮಾನವ, ಕ್ರೋಮೆಗ್ನಾನ್ ಮಾನವ ಮುಂತಾದವುಗಳನ್ನು ಅನುಕ್ರಮವಾಗಿ ಉಲ್ಲೇಖಿಸಲಾಗಿದೆ. ಇಂದು ಮಾನವನ ಪೂರ್ವಜರು ಶಾರೀರಿಕ ವೈಲಕ್ಷ್ಯಣ್ಯಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಹೊಂದಿದ್ದರೆಂಬುದನ್ನು ಶೋಧಗಳಿಂದ ಸಿದ್ಧಪಡಿಸಲಾಗಿದೆ. ಇಂದು ಮಾನವ ಉತ್ಪತ್ತಿಯ ಬಗ್ಗೆ ಧಾರ್ಮಿಕ ಅಂಧಶ್ರದ್ಧೆಗಳಿಗಿಂತ ವೈಜ್ಞಾನಿಕವಾಗಿ ಪ್ರತಿಪಾದಿಸಲ್ಪಟ್ಟ ಅಭಿಪ್ರಾಯಗಳೇ ಪಂಡಿತರ ಮನಸ್ಸನ್ನು ಆಕರ್ಷಿಸಿವೆ.

---

## ೪. ಮಾನವ ಶಾಸ್ತ್ರಜ್ಞನ ದೃಷ್ಟಿಯಲ್ಲಿ ಇಂದಿನ ಭಾರತ

ಅಸಾಧಾರಣ ಮತ್ತು ಭವ್ಯ ಪರಂಪರೆಯನ್ನು ಹೊಂದಿದ ಮಾನವ ಶಾಸ್ತ್ರವು ಭಾರತ ದೇಶಕ್ಕೆ ಯಾವ ರೀತಿಯಿಂದ ತನ್ನ ಸೇವೆಯನ್ನು ಸಲ್ಲಿಸಬಹುದು ಎಂಬುದನ್ನು ವಿವೇಚಿಸುವದು ಅಗತ್ಯವಾಗಿದೆ. ನಮ್ಮ ದೇಶದ ಬಗ್ಗೆ ಸ್ವಲ್ಪ ವಿವರವಾಗಿ ತಿಳಿದುಕೊಳ್ಳುವ ಕೆಲವು ಮುಖ್ಯ ಅಂಶಗಳಿವೆ. ಭಾರತ ದೇಶವು ಬಹು ವಿಶಾಲವಾದದ್ದು. ಹಿಂದೆ ಹಿಂದುಗಳ, ಮುಸಲ್ಮಾನರ, ಮೊಗಲರ ಮತ್ತು ಬ್ರಿಟಿಶರ ರಾಜ್ಯಗಳು ಇಲ್ಲಿ ರಾಜ್ಯಭಾರವನ್ನು ಮಾಡಿದವು. ದೇಶವು ಸಾಂಸ್ಕೃತಿಕವಾಗಿ ಒಂದಾಗಿದ್ದರೂ ಕೂಡ ರಾಜಕೀಯವಾಗಿ ಒಂದುಗೂಡಿರಲಿಲ್ಲ. ಆದ್ದರಿಂದ ಭಾರತೀಯ ಜನಜೀವನವು ಒಂದು ದೇಶದವರು ಎಂಬ ಹಿನ್ನೆಲೆಯಿಂದ ಕಾರ್ಯ ಕೈಕೊಂಡಿರಲಿಲ್ಲ. ಬ್ರಿಟಿಶರ ಆಳಿಕೆಯಲ್ಲಿ ಭಾರತೀಯರು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಬೇರೂರಿರುವ ಉದಾತ್ತ ವಿಚಾರಗಳನ್ನು ಅವಲೋಕಿಸಲು ಪ್ರಾರಂಭಿಸಿದರು. ಜತೆಗೆ ಪಾಶ್ಚಿಮಾತ್ಯರ ಮಾತೃ ಭಾಷೆಯನ್ನು ಭಾರತೀಯರು ಕಲಿತು ಅವರ ಜೀವನ ಮೌಲ್ಯಗಳ ಬಗ್ಗೆ ತಿಳಿಯಲು ಪ್ರಯತ್ನಿಸಿದರು. ಇವುಗಳ ಪರಿಣಾಮವಾಗಿ ಭಾರತೀಯರಲ್ಲಿ ರಾಷ್ಟ್ರೀಯ ಅಭಿಮಾನಗಳು ಅಂಕುರಿಸತೊಡಗಿದವು. ದೇಶದಲ್ಲಿದ್ದ ವಿವಿಧ

ಪಂಗಡಗಳು ಒಂದುಗೂಡಿ ೧೮೮೫ ರಲ್ಲಿ ಹ್ಯೂಮನೆಂಬ ಭಾರತದ ಸ್ನೇಹಿತನು ಹಲವು ಭಾರತೀಯರನ್ನು ಕೂಡಿಸಿ ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿದನು. ಮೊದಮೊದಲು ಈ ಸಂಸ್ಥೆಯು ಬ್ರಿಟಿಶರ ಅಧೀನದಲ್ಲಿದ್ದರೂ ಕೂಡ ಮುಂದೆ ಆ ಸಂಸ್ಥೆಯು ರಾಷ್ಟ್ರೀಯ ಸಂಸ್ಥೆಯ ರೂಪವನ್ನು ತಳೆಯಿತು. ಸ್ವರಾಜ್ಯ ಪಡೆಯುವ ಸಲುವಾಗಿ ಒಂದು ದೊಡ್ಡ ಕಾರ್ಯಕ್ರಮವನ್ನೇ ಮಾಡಿಕೊಂಡಿತು. ಭಾರತದ ಜನಪ್ರಿಯ ನಾಯಕರಾದ ಮೋತಿಲಾಲ ನೆಹರೂ, ಮದನ ಮೋಹನ ಮಾಲವೀಯ, ಮೋಹನದಾಸ ಕರಮಚಂದ ಗಾಂಧಿ, ವಲ್ಲಭಭಾಯಿ ಪಟೇಲ, ಬಾಳ ಗಂಗಾಧರ ಟಿಳಕ, ಜವಾಹರಲಾಲ ನೆಹರೂ, ಸುಭಾಸ ಚಂದ್ರ ಭೋಸ, ರಾಜೇಂದ್ರ ಪ್ರಸಾದ, ಲಾಲಬಹದ್ದೂರ ಶಾಸ್ತ್ರಿ ಮುಂತಾದ ವ್ಯಕ್ತಿಗಳಿಂದ ಕಾಂಗ್ರೆಸ್ ಸಂಸ್ಥೆಯು ಶೋಭೆ ಪಡೆಯಿತು. ಸ್ವಾತಂತ್ರ್ಯದ ಆಂದೋಲನವನ್ನು ಹೂಡಿ ಜನ ಜಾಗೃತಿಯನ್ನು ಮೂಡಿಸಿ ಬ್ರಿಟಿಶರಿಗೆ ತಮ್ಮ ದೇಶಕ್ಕೆ ಮರಳಲು ಆಹ್ವಾನವಿತ್ತರು. ಸುಮಾರು ೫೦ ವರ್ಷಗಳ ವರೆಗೆ ಅವ್ಯಾಹತವಾಗಿ ನಡೆದ ಸ್ವಾತಂತ್ರ ಆಂದೋಲನವು ಕೊನೆಯಲ್ಲಿ ಅಂದರೆ ೧೯೪೭ ನೇ ಅಗಸ್ಟ ೧೫ ರಂದು ತನ್ನ ಧ್ಯೇಯ ಸಾಧಿಸಿಕೊಂಡಿತು. ಭಾರತೀಯರು ತಮ್ಮ ಸ್ವಾತಂತ್ರ್ಯವನ್ನು ಮರಳಿ ಪಡೆದರು. ಈ ಸಂಗ್ರಾಮದಲ್ಲಿ ಸಾವಿರಾರು ಜೀವಿಗಳು ತಮ್ಮ ಜೀವನವನ್ನು ಬಲಿದಾನವಾಗಿ ಕೊಟ್ಟು ಅಮರರಾದರು. ಇಂದು ನಾವು ಅವರ ಬಲಿದಾನದಿಂದ ನಿರ್ಮಾಣಗೊಂಡ ರಾಷ್ಟ್ರದಲ್ಲಿದ್ದೇವೆಂಬುದನ್ನು ಪ್ರತಿಯೊಬ್ಬರು ಸದಾಕಾಲವೂ ಸ್ಮರಿಸುತ್ತಿರ

ಬೇಕು. ಆದರೆ ದುರ್ದೈವದ ಘಟನೆಯೆಂದರೆ ಭಾರತ ದೇಶ ಎರಡು ತುಂಡುಗಳಾದುದು.

ಈ ರೀತಿಯಲ್ಲಿ ಗಳಿಸಿದ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವ ಜವಾಬ್ದಾರಿಯು ನಮ್ಮೆಲ್ಲರ ಮೇಲಿದೆ. ನಮ್ಮ ಪ್ರತಿನಿಧಿಗಳು ನಮ್ಮ ಸಲುವಾಗಿ ಇಂದು ಅನೇಕ ರೀತಿಯಲ್ಲಿ ಭಾರತ ದೇಶವನ್ನು ಸಮೃದ್ಧಿಗೊಳಿಸುವ ಸಲುವಾಗಿ ಶ್ರಮಪಡುತ್ತಿರುವದನ್ನು ನಾವೆಲ್ಲರೂ ನೋಡುತ್ತೇವೆ. ನಮ್ಮ ದೇಶದಲ್ಲಿ ಅನೇಕ ವಿಧದ ನೂರಾರು ಸಮಸ್ಯೆಗಳಿವೆ. ಅವೆಂದರೆ— ಉಣ್ಣಲು ಆಹಾರ, ಹೊದ್ದುಕೊಳ್ಳಲು (ಉಡಲು) ಬಟ್ಟೆ ಮತ್ತು ವಾಸಿಸಲು ಮನೆ. ಆಹಾರ, ಬಟ್ಟೆ, ವಸತಿ ಈ ಸಮಸ್ಯೆಗಳನ್ನು ಪರಿಹಾರ ಮಾಡಲು ಸರಕಾರವು ಬೃಹತ್ಪ್ರಮಾಣದಲ್ಲಿ ರಾಷ್ಟ್ರೀಯ ವಿಕಾಸ ಯೋಜನೆಗಳನ್ನು ಕೈಗೆತ್ತಿಕೊಂಡಿದೆ. ಇಪ್ಪತ್ತು ವರ್ಷಗಳು ಮೂರು ಯೋಜನೆಗಳಿಂದ ತುಂಬಿದ್ದು ಅವುಗಳು ತಮ್ಮ ಮೂಲ ಸಮಸ್ಯೆಗಳನ್ನು ಬಗೆಹರಿಸುವಂತಾಗಲಿಲ್ಲ. ಮಾನವ ಶಾಸ್ತ್ರಜ್ಞನ ದೃಷ್ಟಿಯಲ್ಲಿ ಇಂದಿನ ಭಾರತವು ಯಾವ ಸ್ಥಿತಿಯಲ್ಲಿದೆ ಎಂಬುದನ್ನು ಈ ಕೆಲ ಅಂಶಗಳಿಂದ ವ್ಯಕ್ತಪಡಿಸಬಹುದು.

೧. ಸ್ವಾತಂತ್ರ್ಯದ ಸಂಗ್ರಾಮದಲ್ಲಿ ಉದಯಿಸಿದ ಆದರ್ಶಗಳು, ಧ್ಯೇಯಗಳು ಮತ್ತು ಒಂದು ದೇಶದ ನಾಗರಿಕರೆಂದು ಹೇಳಿಕೊಳ್ಳುವ ಭಾವನೆಗಳು ಈ ಕಳೆದ ಇಪ್ಪತ್ತು ವರ್ಷಗಳಲ್ಲಿ ಕ್ರಮೇಣವಾಗಿ ನಮ್ಮೆಲ್ಲರ ಕೈಬಿಡತೊಡಗಿವೆ.

೨. ಮೂಲ ಸಮಸ್ಯೆಗಳ ಜೊತೆಗೆ ನಾವು ನಮ್ಮ ಬುದ್ಧಿ ಅಭಾವದಿಂದ ಅನೇಕ ಹೊಸ ಸಮಸ್ಯೆಗಳನ್ನು ನಿರ್ಮಿಸುತ್ತಿದ್ದೇವೆ. ಅವುಗಳು ನಮ್ಮೆಲ್ಲರನ್ನು ಯಾವ ದುರ್ದೆಶೆಗೀಡು ಮಾಡುವವು ಎಂಬುದು ತಿಳಿಯದ ಹಾಗೆ ಆಗಿದೆ. ಉದಾಹರಣೆಗಾಗಿ- ಹೊಸ ಹೊಸ ರಾಜ್ಯಗಳನ್ನು ರಚಿಸುತ್ತಿರುವುದು, ರಾಜ್ಯಗಳ ಗಡಿಗಳ ಹೊಂದಾಣಿಕೆಯ ಬಗ್ಗೆ ಭಾವನಾತ್ಮಕ ಒಲವು ಮತ್ತು ಪ್ರಾಂತೀಯ ಭಾವನೆಗಳು ಮುಖ್ಯ ಸ್ಥಾನವನ್ನು ಪಡೆಯುವವಾಗಿದೆ.

೩. ಸ್ವಾತಂತ್ರ್ಯದ ನಂತರ ಮೂರು ಮಹಾಚುನಾವಣೆಗಳು ನಡೆದವು. ಅವೆಲ್ಲವೂ ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸುವದರ ಬದಲಾಗಿ ನಮ್ಮಲ್ಲಿ ನಡೆದು ಬಂದ ಕೆಲವು ಪರಂಪರೆಗಳನ್ನು ಪೋಷಿಸಿವೆ. ಜಾತಿಗಳು ಮತ್ತು ಜಾತೀಯತೆಯ ಭಾವನೆಗಳು ಪೋಷಿಸಲ್ಪಟ್ಟಿವೆ. ಇದು ಪ್ರಜಾರಾಜ್ಯದ ಲಕ್ಷಣಗಳಿಗೆ ವಿರುದ್ಧವಾಗಿದೆ.

೪. ರಾಜಕೀಯದಲ್ಲಿ ಭಾಗವಹಿಸುವವರಿಗೆ ತಮ್ಮ ಧ್ಯೇಯ ಧೋರಣೆಗಳನ್ನು ಸಾಧಿಸುವ ಮತ್ತು ಸಾಧ್ಯವಿದ್ದಷ್ಟು ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಬೇಕೆಂಬ ಹಂಬಲವಿದೆ. ಹೊರತು ಒಂದು ನಿಜವಾದ ರಾಷ್ಟ್ರಾಭಿಮಾನದಿಂದ ಸಮಾಜದ ಪ್ರಗತಿಗೆ ತನ್ನನ್ನು ಸಮರ್ಪಿಸುವ ಭಾವನೆಗಳು ಮುಳುಗಿ ಹೋಗಿವೆ. ಭಾರತದ ರಾಜ್ಯಗಳಲ್ಲಿ ಪಕ್ಷತ್ಯಜಿಸಿ ರಾಜಕೀಯ ಪರಿಸ್ಥಿತಿಯನ್ನು ಹದಗೆಡಿಸುವ ಕಾರ್ಯಕ್ಕೆ ರಾಜಕಾರಣಿಗಳು ಇಂದು ಮುಂದಾಗಿದ್ದಾರೆ.

೫. ಚುನಾವಣೆಯ ಹೊರತು ಯಾವ ರಾಜಕೀಯ ಪಕ್ಷವೂ ಭಾರತದ ಕೋಟ್ಯಂತರ ಜನಗಳ ಸಲುವಾಗಿ ಯಾವದೇ ರೀತಿಯ ರಚನಾತ್ಮಕ ಕಾರ್ಯಗಳನ್ನು ಇದುವರೆಗೆ ಕೈಗೊಂಡಿಲ್ಲ. ಆದ್ದರಿಂದ ನಮ್ಮ ರಾಜಕೀಯ ಪಕ್ಷಗಳು ಮತ್ತು ಜನತೆ ಒಬ್ಬರಿಂದೊಬ್ಬರು ದೂರವಿದ್ದಾರೆ. ಹಳ್ಳಿಗಳಲ್ಲಿ ಹಲವರು ರಾಜಕೀಯ ಪಕ್ಷಗಳಿಗೆ ಸೇರಿದವರಾಗಿದ್ದರೂ ಅವರು ತಮ್ಮ ಜನರೊಂದಿಗೆ ರಾಜಕೀಯ ಜೀವನದಲ್ಲಿ ಯಾವ ರೀತಿಯ ತರಬೇತಿಯನ್ನೂ ಹೊಂದಿರುವದಿಲ್ಲ.

೬. ಐಕ್ಯತೆ ತರುವ ಸಾಧನಗಳು ಇಂದು ನಮ್ಮನ್ನು ಪರಸ್ಪರ ವೈರಿಗಳನ್ನಾಗಿ ಮಾರ್ಪಡಿಸಲು ಪ್ರಯತ್ನಿಸುತ್ತಿವೆ. ನಮ್ಮ ದೇಶದಲ್ಲಿ ಬಹುಭಾಷಿಗಳು ವಾಸಿಸುತ್ತಾರೆ. ಇದಲ್ಲದೆ ಭಾಷಾವಾರು ಪ್ರಾಂತಗಳು ನಿರ್ಮಿಸಿದ್ದರ ಫಲವಾಗಿ ಅಂತರ ಪ್ರಾಂತಗಳ ಸಂಬಂಧಗಳು ಯಾವ ಭಾಷೆಯಲ್ಲಿರಬೇಕೆಂಬುದು ಮುಖ್ಯವಾದ ಸಮಸ್ಯೆ. ಅದಕ್ಕೆ ಬಹಳ ಹಿಂದೆ ನಾವೆಲ್ಲರೂ "ಹಿಂದಿ" ನಮ್ಮ ರಾಷ್ಟ್ರಭಾಷೆ ಎಂದು ಒಪ್ಪಿದ್ದರೂ ಕೂಡ ಅದೇ ನಮ್ಮನ್ನು ಇಂದು ಬೇರೆ ಮಾಡತೊಡಗಿದೆ. ಮೊನ್ನೆ ತಾನೆ ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಸಂಭವಿಸಿದ ಗಲಭೆಗಳೇ ಇದಕ್ಕೆ ಸಾಕ್ಷಿಯಾಗಿವೆ. ಇದಕ್ಕೆ ಮುಖ್ಯವಾಗಿ ಉತ್ತರ ಭಾರತದ ಜನರು ಹಿಂದಿಯ ಬಗ್ಗೆ ತಾಳಿದ ಧೋರಣೆಯೇ ಕಾರಣವಾಗಿದೆ ಎಂದು ಹೇಳಿದರೆ ತಪ್ಪಾಗದು. ಅವರು ಈಗ ಹಿಂದಿಯನ್ನು ಎಲ್ಲರಿಗೂ ಕಲಿಸುವದು ತಮ್ಮ

ಕರ್ತವ್ಯವೆಂದೂ ಉಳಿದವರು ಸಹ ಹಾಗೇ ಮಾಡಬೇಕೆಂದೂ ಪಣತೊಟ್ಟಿದ್ದು ವಿಷಾದಕರ. ದಕ್ಷಿಣದವರು ಹಾಗು ತಾವು ಬೇರೆ ಜನಾಂಗ ಎನ್ನುವಷ್ಟು ಶೋಚನೀಯ ಮಾನಸಿಕ ಸ್ಥಿತಿಗೆ ಅವರು ಅಂಟಿಕೊಡಿದ್ದಾರೆ.

೭. ಔದ್ಯೋಗಿಕ ಕೇಂದ್ರಗಳಲ್ಲಿ ಒಕ್ಕಲುತನದಲ್ಲಿ ಮತ್ತು ಇನ್ನಿತರ ಕಾರ್ಯ ಕ್ಷೇತ್ರಗಳಲ್ಲಿ ನಾವು ಮೈ ಮರೆತು ದುಡಿಯುವದನ್ನು ಕಲಿತು ರಾಷ್ಟ್ರದ ಉನ್ನತಿ ಸಾಧಿಸಿಕೊಳ್ಳದೆ ಯಾವ ರೀತಿಯಿಂದ ನಾವು ಕೆಲಸ ತಪ್ಪಿಸಿಕೊಳ್ಳಬಹುದು ಎಂಬ ಭಾವನೆಗಳಿಂದ ಕೂಡಿದವರಾಗಿದ್ದೇವೆ. ತಮ್ಮ ಸ್ವಂತದ ಸುಖಕ್ಕೆ ಹೆಚ್ಚು ಗಮನ ಕೊಡುವ ಭಾವ ಭೂತಾಕಾರವಾಗಿ ಬೆಳೆದು ನಿಂತಿದೆ. ವಿಲಂಬತೆ, ಆಲಸೀತನಗಳೇ ಇದಕ್ಕೆ ಕಾರಣವಾಗಿವೆ.

೮. ಪ್ರಜಾರಾಜ್ಯವೆಂದರೆ ಅಲ್ಪ ಸ್ವಲ್ಪ ಬಲ್ಲವನೂ ಕೂಡ ತಾನು ಸ್ವತಂತ್ರ ರಾಜ ಎಂದೇ ನಟಿಸುತ್ತಾನೆ. ಯಾವಾಗಲೂ ತನ್ನ ಹಕ್ಕು ಏನೆಂಬುದನ್ನು ನೆನಪಿನಲ್ಲಿಟ್ಟು ತಾನು ಮಾಡಬೇಕಾದ ಕರ್ತವ್ಯದ ಕಡೆಗೆ ಉದಾಸೀನತೆಯನ್ನು ತೋರುತ್ತಾನೆ.

೯. ಅಧಿಕಾರಿಗಳ ದರ್ಪ ಮತ್ತು ಜನರ ಅಜ್ಞಾನ ಮತ್ತು ರಾಜಕಾರಣಿಗಳ ಕುತಂತ್ರ ಮೊದಲಾದವುಗಳು ನಮ್ಮ ಎಲ್ಲ ಯೋಜನೆಗಳು ಸಂಪೂರ್ಣವಾಗಿ ಲಾಭವನ್ನು ಪಡೆಯುವದಕ್ಕೆ ಮಾರಕವಾಗಿವೆ.

೧೦. ಹದಗೆಟ್ಟ ರಾಜಕೀಯ ಜೀವನ ಮತ್ತು ಅಪ್ರಮಾಣಿಕ ಆಡಳಿತ. ಅಲ್ಲದೇ ಲಂಚಬಡಕತನ ಇವೇ ಮೊದಲಾದವು ಬಡವರನ್ನು ಮುಂದೆ ಬರದ ಹಾಗೆ ಮಾಡಿವೆ.

೧೧. ಯೋಜನೆಯ ಲಾಭವನ್ನು ಶ್ರೀಮಂತ ವರ್ಗವೇ ಪಡೆದಿದೆಯೇ ವಿನಹ ಬಡವರ್ಗವಲ್ಲ. ಇದರ ಬಗ್ಗೆ ಕೇಂದ್ರ ಸರಕಾರವು ವೈಜ್ಞಾನಿಕ ದೃಷ್ಟಿಯಲ್ಲಿ ಶೋಧನೆಯನ್ನು ಕೈಕೊಳ್ಳಲು ಮಾನವ ಶಾಸ್ತ್ರಜ್ಞರಿಗೆ ಕೇಳಿಕೊಂಡಿತು. ಅವರ ಶೋಧನೆಯ ಪರಿಣಾಮವಾಗಿ ಈ ವಿಷಯವು ಬೆಳಕಿಗೆ ಬಂದಿತು.

೧೨. ಶಿಕ್ಷಣ ವಿಭಾಗವು ಇಂದು ಯಾವ ರಾಷ್ಟ್ರೀಯ ಧೋರಣೆಯನ್ನೂ ಹೊಂದಿಲ್ಲ. ಇದಕ್ಕೆ ಕಾರಣವೇನೆಂಬುದನ್ನು ತಿಳಿಯುವದು ಸಾಧ್ಯವಿಲ್ಲ. ಬಹು ಸಂಖ್ಯಾತ ವಿದ್ಯಾರ್ಥಿಗಳಿಗೆ ತಾವು ಏಕೆ ಶಿಕ್ಷಣ ಪಡೆಯುತ್ತೇವೆ? ತಮ್ಮ ಧ್ಯೇಯವೇನು? ಎಂಬುದರ ಬಗ್ಗೆ ಪ್ರಜ್ಞೆಯೂ ಕೂಡ ಇಲ್ಲ. ಶಿಕ್ಷಕರಿಗೂ ಸಹ ತಾವು ಮಾಡುತ್ತಿರುವ ಕಾರ್ಯವು ನವರಾಷ್ಟ್ರ ನಿರ್ಮಾಣ ಸಾಧನೆಗಳಲ್ಲಿ ಒಂದು ಎಂಬುದರ ಅರಿವಿದ್ದಂತೆ ಕಾಣಿಸುವದಿಲ್ಲ. ಶಿಕ್ಷಣದಲ್ಲಿ ಚಾರಿತ್ರ್ಯ ನಿರ್ಮಾಣದ ಕಾರ್ಯವು ಮುಖ್ಯವಾದದ್ದು. ಆದರೆ ದುರ್ದೈವದ ಸಂಗತಿಯೆಂದರೆ ಅವರಿಗೆ ಆದರ್ಶ ಜೀವಂತ ವ್ಯಕ್ತಿಗಳು ಸಿಕ್ಕುವುದೇ ದುರ್ಲಭವಾಗಿ ಯಾರ ಅನುಕರಣೆ ಮಾಡಬೇಕು ಎಂಬುದು ಅವರಿಗೆ ತಿಳಿಯದಾಗಿದೆ. ಸಮಾಜದಲ್ಲಿನ ವಾತಾವರಣ ಸುಧಾರಣೆಯಾಗದ ವಿನಹ ಶಿಕ್ಷಣ ಕ್ಷೇತ್ರದಲ್ಲಿ ಯಾವ ಆದರ್ಶವನ್ನೂ ಬದಲಾವಣೆಯನ್ನೂ ಸಹ ನಾವು ಪಡೆಯಲು ಸಾಧ್ಯವಿಲ್ಲ.

೧೩. ಅಂತರ ರಾಷ್ಟ್ರೀಯ ರಾಜಕೀಯದಲ್ಲಿ ಭಾರತದ ಸ್ಥಾನವೇನು? ಎಂಬುದನ್ನು ಚರ್ಚಿಸುವದು ಬಹಳ ತೊಂದರೆ ದಾಯಕವಾದುದಾಗಿದೆ. ನಮ್ಮ ತಟಸ್ಥ ಧೋರಣೆಯ ಬಗ್ಗೆ ಅನೇಕರಿಗೆ ಸಂಶಯ ಬರತೊಡಗಿದೆ. ಇಂದು ನಮ್ಮ ನೆರೆ ಹೊರೆಯ ರಾಷ್ಟ್ರಗಳು ನಮ್ಮೊಡನೆ ವೈರಭಾವವನ್ನು ತಳೆದಿವೆ. ಜಗತ್ತಿನ ಎರಡೂ ಬಣಗಳಲ್ಲಿ ನಮ್ಮ ಸ್ಥಾನವೇನೆಂಬುದು ಇನ್ನೂ ನಿರ್ಣಯವಾಗಿಲ್ಲ. ಇನ್ನೂ ನಮ್ಮ ಸಮಸ್ಯೆಗಳು ಸಮ ಸ್ಯೆಗಳಾಗಿಯೇ ಉಳಿದು ಅವುಗಳನ್ನು ಬಗೆಹರಿಸಿಕೊಳ್ಳುವ ಮಾರ್ಗವೂ ಕಾಣದಾಗಿದೆ.

೧೪. ರಾಷ್ಟ್ರೀಯ ಐಕ್ಯದ ಭಾವನೆಗಳನ್ನು ಜನರಲ್ಲಿ ಬೇರೂರಿಸಲು ಇಂದು ಸರಕಾರವು ಅನೇಕ ಕ್ರಮ ಕೈಕೊಳ್ಳ ಬೇಕಾಗಿದೆ. ಈ ಐಕ್ಯದ ಅಭಾವವು ಯಾವುದೇ ಯೋಜನೆಯು ಯಶಸ್ವಿಯಾಗಲು ಅಡ್ಡಿ ಬರುವದುಂಟು.



## ೫. ಭಾರತದಲ್ಲಿ ಮಾನವ ಶಾಸ್ತ್ರದ ಅಭ್ಯಾಸ ಮತ್ತು ಅದು ಕೈಕೊಂಡ ಕಾರ್ಯ

ಮಾನವ ಶಾಸ್ತ್ರದ ಮೊದಲನೆಯ ವಿಭಾಗವು ಕಲಕತ್ತೆಯ ವಿಶ್ವವಿದ್ಯಾಲಯದಲ್ಲಿ ೧೯೨೦ ರಲ್ಲಿ ಪ್ರಾರಂಭವಾಯಿತು. ಮೊದಲು ಭಾರತೀಯ ಆದಿವಾಸಿಗಳ ಜೀವನವನ್ನು ತಿಳಿದುಕೊಳ್ಳುವುದು ಮತ್ತು ಭಾರತೀಯ ಜನಾಂಗದ ಮೂಲ ಪುರುಷರು ಯಾವ ಯಾವ ಜನಾಂಗಗಳಿಂದ ಬಂದವರಾಗಿದ್ದರು ಎಂಬುದನ್ನು ಕಂಡು ಹಿಡಿಯುವದೇ ಇದರ ಉದ್ದೇಶವಾಗಿತ್ತು. ಆದರಿಂದ ಮಾನವ ವಿಜ್ಞಾನಿಗಳ ವಿಚಾರಣೆಗಳಿಗೆ ಮನ್ನಣೆ ದೊರೆಯಿತು. ಈ ಶಾಸ್ತ್ರದಲ್ಲಿ ನಿರಂತರವಾಗಿ ಮತ್ತು ಆಸ್ಥೆಯಿಂದ ದುಡಿದವರಲ್ಲಿ ಡಿ. ಎನ್. ಮಜುಮದಾರ, ಸರತಚಂದ್ರ ರಾಯ್, ಡಾ|| ನಿರ್ಮಲಕುಮಾರ ಭೋಸ್, ಸಿನ್ಹಾ ಮೊದಲಾದವರು ಪ್ರಮುಖರು. ಇವರು ಮಾನವ ಶಾರೀರಿಕ ವಿಜ್ಞಾನದಿಂದ ಪ್ರಾರಂಭಿಸಿ ಅನೇಕ ಶಾಖೆಗಳಲ್ಲಿ ಪ್ರಗತಿಯನ್ನು ಸಾಧಿಸಲು ಕಾರಣರಾದರು. ಮುಂದೆ ಲಖನೌ ಮತ್ತು ದಕ್ಷಿಣದಲ್ಲಿ ಮದ್ರಾಸ್ ವಿಶ್ವವಿದ್ಯಾಲಯಗಳಲ್ಲಿಯೂ ಕೂಡ ಈ ಶಾಸ್ತ್ರದ ವಿಭಾಗಗಳು ಪ್ರಾರಂಭವಾದವು. ಸ್ನಾತಕೋತ್ತರ ಮತ್ತು ಪದವಿ ತರಗತಿಗಳಲ್ಲಿ ಈ ಶಾಸ್ತ್ರದ ಬೋಧನೆ ನಡೆಯಿತು. ಪ್ರತ್ಯೇಕ

ವಾಗಿ ರಚಿಸಲ್ಪಟ್ಟ ವಿಭಾಗಗಳು ಬಹಳ ಕಡಿಮೆ ಸಂಖ್ಯೆಯ ಲ್ಲಿದ್ದರೂ ಕೂಡ ಅನೇಕ ವಿಶ್ವವಿದ್ಯಾಲಯಗಳಲ್ಲಿ ಸಮಾಜ ಶಾಸ್ತ್ರದ ವಿಭಾಗದಲ್ಲಿ ಮಾನವ ಶಾಸ್ತ್ರವೂ ಸಹ ಸಮಾವೇಶ ಗೊಂಡಿತ್ತು. ಒಂದಿಲ್ಲ ಒಂದು ವಿಧದಲ್ಲಿ ಈ ವಿಷಯುವು ಮಾನವ ಸಮಾಜದ ಅಧ್ಯಯನಕ್ಕೆ ಅವಶ್ಯವೆಂದು ಎಲ್ಲರಿಗೂ ತಿಳಿದಿತ್ತು.

ಇಂದು ಅನೇಕ ವಿಶ್ವವಿದ್ಯಾಲಯಗಳು ಮಾನವಶಾಸ್ತ್ರದ ಪ್ರತ್ಯೇಕವಾದ ವಿಭಾಗವನ್ನು ಪ್ರಾರಂಭಿಸಲು ಮುಂದೆ ಬಂದಿವೆ. ಆದರ ಪರಿಣಾಮವಾಗಿ ಇಂದು ಸುಮಾರು ೧೩ ವಿಶ್ವವಿದ್ಯಾಲಯ ಗಳಲ್ಲಿ ಈ ವಿಷಯುವು ಎಲ್ಲ ಮಟ್ಟಗಳಲ್ಲಿ ಬೋಧಿಸಲ್ಪಡುತ್ತದೆ.

ಭಾರತ ದೇಶದ ಜನಜೀವನ ಮತ್ತು ರಾಜಕೀಯ ಜೀವ ನದ ಈ ಚಿತ್ರವು ನಿಜವಾಗಿ ಭೀಕರವಾದಂತಹದು. ಆದರೆ ಅದನ್ನು ಸರಿ ಪಡಿಸಲು ಸಾಧ್ಯವೇ ಇಲ್ಲವೆಂದಲ್ಲ. ನಾವು ಅವು ಗಳನ್ನು ನೋಡಿ ಭಯಪಡಬೇಕಾಗಿಲ್ಲ. ಭಾರತದ ಇತಿಹಾಸ ದಲ್ಲಿ ಇಂದು ಲಭ್ಯವಾಗುವ ಸಾಧನಗಳು ಎಂದಿಗೂ ಇರಲಿಲ್ಲ. ನಮ್ಮ ಜೀವನವನ್ನು ಉತ್ತಮಗೊಳಿಸುವ ಸಲುವಾಗಿ ನಮ್ಮಲ್ಲಿ ವಿಪುಲ ಸಾಧನಗಳಿವೆ. ಆದರೆ ಅವುಗಳ ಉಪಯೋಗವನ್ನು ಮಾಡಿಕೊಳ್ಳುವ ಚತುರತೆ ನಮಗಿರಬೇಕು.

ಭಾರತದಲ್ಲಿ ನೈಸರ್ಗಿಕ ಸಂಪತ್ತು ವಿಪುಲವಾಗಿದೆ. ಜನ ಶಕ್ತಿ ಭವ್ಯವಾಗಿದೆ. ವೈಜ್ಞಾನಿಕ ಸಾಧನೆ, ಸಲಕರಣೆಗಳಿವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಸಾವಿರಾರು ಕೋಟಿ ರೂಪಾಯಿಗಳನ್ನು

ಅಭಿವೃದ್ಧಿ ಕಾರ್ಯಗಳ ಸಲುವಾಗಿ ವೆಚ್ಚ ಮಾಡಿದ್ದೇವೆ. ಅವುಗಳ ಪೂರ್ಣ ಫಲ ಪಡೆಯದಿದ್ದರೂ ಸ್ವಲ್ಪ ಮಟ್ಟಿಗೆ ಅದರ ಲಾಭವೂ ಆಗಿದೆ ಎಂದು ನಿಃಸಂಶಯವಾಗಿ ಹೇಳಬಹುದು. ಉದಾಹರಣೆಗಾಗಿ ಹೊಸ ಆಣೆಕಟ್ಟುಗಳನ್ನು ಕಟ್ಟಿಸುವದು. ಉದ್ದಿಮೆಗಳನ್ನು ಸ್ಥಾಪಿಸುವದು, ಉತ್ಪಾದನಾ ಶಕ್ತಿಯನ್ನು ಹೆಚ್ಚಿಸುವದು, ಸಾರಿಗೆ ಸಂಪರ್ಕ ಸೌಕರ್ಯಗಳನ್ನು ಉತ್ತಮ ಗೊಳಿಸುವದು. ಸಾಕ್ಷರತೆಯನ್ನು ಹೆಚ್ಚಿಸುವದು, ಅಂಕಿ ಸಂಖ್ಯೆ ಗಳ ಮೂಲಕ ನಮ್ಮ ಜೀವನ ಮಟ್ಟವನ್ನು ಸುಧಾರಿಸಿದ್ದೇ ವೆಂದು ಹೇಳುವುದು, ಇವೆಲ್ಲವೂ ನಿಜ. ಆದರೆ-ಮುಖ್ಯವಾಗಿ ಪ್ರತಿಶತ ಎಪ್ಪತ್ತೈದ [75%] ರಷ್ಟು ಜನತೆಯು ಯಾವ ಸೌಲಭ್ಯವನ್ನೂ ಕಾಣದಾಗಿದೆ. ಇದಕ್ಕೆ ಕಾರಣವೆಂದರೆ ಇವುಗಳ ಲಾಭ ಪಡೆದವರು ಕೇವಲ ಸಮಾಜದ ಒಂದು ಚಿಕ್ಕ ವರ್ಗವೆಂದು ಮಾತ್ರ ಹೇಳಬಹುದು.

ಈ ರೀತಿಯ ನಮ್ಮ ವಿಫಲತೆಗೆ ಕಾರಣವೆಂದರೆ ನಮಗೆ ನಮ್ಮ ಸಮಾಜದ ಬಗ್ಗೆ ಪರಿಪೂರ್ಣ ಮತ್ತು ಶಾಸ್ತ್ರೀಯವಾದ ಜ್ಞಾನದ ಅಭಾವವೆಂದೇ ಹೇಳಬಹುದು. ಸರಕಾರವು ಚುನಾ ವಣೆಯ ಮೂಲಕ ಅಧಿಕಾರಕ್ಕೆ ಬಂದ ಕಾರಣ ಐದು ವರ್ಷ ಗಳಲ್ಲಿ ಏನಾದರೂ ಮಾಡಿ ಜನತೆಯಿಂದ ಮತ್ತೆ ಐದು ವರ್ಷ ಜೀವದಾನ ಪಡೆಯಬೇಕೆಂಬ ಹಂಬಲಹೊಂದಿರುತ್ತದೆ. ಮತ್ತು ಅದಕ್ಕೆ ಜನರ ಜೀವನದ ಬಗ್ಗೆ ಆಳವಾದ ಅಭ್ಯಾಸ ಮಾಡ ಬೇಕೆಂಬ ಇಚ್ಛೆಯು ಪ್ರಬಲವಾಗಿರುವದಿಲ್ಲ. ಯೋಜನೆಗಳು ತಜ್ಞರಿಂದ ಮಾಡಲ್ಪಟ್ಟಿವೆ ಎಂಬುದು ನಿಜ. ಆದರೆ ಅವರಿಗೆ

ಜೀವನದ ಪರಿಚಯುವಿಲ್ಲ. ಜನರ ಸಂಪರ್ಕವಿದ್ದವರು ಮತ್ತು ಭಾರತದ ಜೀವನದ ಬಗ್ಗೆ ಆಳವಾದ ಅನುಭವವುಳ್ಳವರು ಕಡಿಮೆ ಯಾಗಿದ್ದರಿಂದ ಯೋಜನೆಗಳು ಸೋಲನ್ನನುಭವಿಸಬೇಕಾಗಿದೆ. ಯೋಜನೆಗಳನ್ನು ಮಾಡುವದು ಎಷ್ಟು ಮುಖ್ಯವೋ ಅದಕ್ಕಿಂತ ಮಹತ್ವದ್ದೆಂದರೆ ಯೋಜನೆಗಳನ್ನು ಕಾರ್ಯರೂಪಕ್ಕೆ ತರು ವದು. ಹೆಜ್ಜೆ ಹೆಜ್ಜೆಗೆ ಜನ-ಜೀವನದ ಪರಿಚಯು ಮತ್ತು ಅದರ ಬಗ್ಗೆ ಕಳಕಳಿಯಿಂದ ಕೆಲಸ ಮಾಡುವದು ಮುಖ್ಯವಾದ ವಿಷಯು. ಇದರ ಅಭಾವದಿಂದಲೇ ನಮ್ಮ ಸಾಮೂಹಿಕ ಯೋಜನೆಗಳು ಪೂರ್ಣ ಯಶಸ್ಸು ತಂದುಕೊಡಲಿಲ್ಲ. ಜನರ ಸಹಕಾರ ಪೂರ್ಣ ರೀತಿಯಲ್ಲಿ ಸಿಗಲಿಲ್ಲ ಎಂದು ಅನೇಕ ಸಲ ಎಲ್ಲ ಮೇಧಾವಿಗಳು ಪದೇ ಪದೇ ಉದಾಹರಿಸುತ್ತಿರುವದನ್ನು ನಾವು ನಮ್ಮ ಗಮನಕ್ಕೆ ತಂದುಕೊಳ್ಳಬೇಕು.

ಹಲವರು ನಮ್ಮಲ್ಲಿ ಪರಸ್ಪರ ವಿರುದ್ಧ ರೀತಿಯಲ್ಲಿ ವರ್ತಿ ಸುವುದನ್ನು ಸಮಾಜದ ಸ್ವಾಭಾವಿಕ ಲಕ್ಷಣವೆಂದೂ ಅದರಿಂದ ಸಮಾಜದ ಐಕ್ಯತೆಗೆ ಧಕ್ಕೆ ಬರುವದಿಲ್ಲವೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇಂದು ನಾವು ನೋಡುತ್ತಿರುವ ಘಟನೆಗಳನ್ನು ಪರಿಶೀಲಿಸಿದರೆ ಅವು ಭಾರತದ ಐಕ್ಯತೆಗೆ ಧಕ್ಕೆ ತರುವಂತಹ ವಾಗಿವೆ. ಪ್ರಾಂತಗಳಲ್ಲಿದ್ದ ಪರಸ್ಪರ ಭೇದ ಭಾವಗಳ ಪ್ರಖರತೆ ಅವುಗಳು ತಾಳಿದ ಧೋರಣೆ, ಮಾತು ಮಾತಿಗೆ ಕೇಂದ್ರ ಸರಕಾರ ವನ್ನು ತೆಗಳುವದು ಮತ್ತು ಸಾಧ್ಯವಾದರೆ ಪ್ರತ್ಯೇಕವಾಗಲು ಹಿಂದು ಮುಂದು ನೋಡದೇ ಇರುವ ಸಂದರ್ಭಗಳು ಆಗಾಗ ಬರುತ್ತಲೇ ಇರುತ್ತವೆ. ಇವುಗಳ ಮೂಲವು ಬಹಳ ಕೆಟ್ಟ ವಿಷ

ಯುಗಗಳಿಂದ ಕೂಡಿದುದರ ಪರಿಣಾಮವಾಗಿ ಅವುಗಳ ಅಂತ್ಯವೂ ಕೂಡ ಹಾಗೆಯೇ ಇರುವುದು ಸಹಜವಾಗಿದೆ.

ನಮ್ಮ ದೇಶ ವಿಶಾಲವಾಗಿದ್ದು ಸುಮಾರು ಐದು ಲಕ್ಷ ಹಳ್ಳಿಗಳಿಂದ ಕೂಡಿಡುದಾಗಿದೆ. ಗಾಂಧೀಜಿಯವರು ಭಾರತ ದೇಶ ಎಂದರೆ ಗ್ರಾಮೀಣದೇಶ ಎಂದು ಕರೆದಿರುವರು. ನೂರಕ್ಕೆ ಎಪ್ಪತ್ತೈದರಷ್ಟು ಜನರು ಗ್ರಾಮಗಳಲ್ಲಿ ವಾಸಿಸುವವರಾಗಿದ್ದಾರೆ. ಉಳಿದ ಜನರು ಪಟ್ಟಣಗಳಲ್ಲಿದ್ದರೂ ಕೂಡ ಅವರಲ್ಲಿ ಬಹುಸಂಖ್ಯ ಜನರು ಗ್ರಾಮೀಣ ಜೀವನದ ಹಿನ್ನೆಲೆಯಲ್ಲಿಯೇ ತಮ್ಮ ಜೀವನವನ್ನು ಸಾಗಿಸುತ್ತಿದ್ದಾರೆ ಎಂಬುದನ್ನು ನಾವು ಮರೆಯಕೂಡದು. ಭಾರತದ ಗ್ರಾಮೀಣ ಜೀವನವು ಅನೇಕ ವೈವಿಧ್ಯತೆಗಳಿಂದ ಕೂಡಿದುದಾಗಿದೆ. ಭಾರತೀಯರ ಜೀವನದ ಬಗ್ಗೆ ಶಾಸ್ತ್ರೀಯ ದೃಷ್ಟಿಯ ವಿವೇಚನೆಗೆ ಮೊದಲಾದುದು ಕೆಲವು ವರ್ಷಗಳ ಹಿಂದೆ ಮಾತ್ರ. ಆದ್ದರಿಂದ ಈ ದಿಸೆಯಲ್ಲಿ ನಮ್ಮ ಕಾರ್ಯವು ಬಹಳ ಮಂದಗತಿಯಲ್ಲಿ ಸಾಗಿದೆ. ಮಾನವ ಶಾಸ್ತ್ರಜ್ಞರು ಇಂದಿನವರೆಗೆ ಭಾರತದಲ್ಲಿನ ಸುಮಾರು ಮೂರು ಕೋಟಿ ಆದಿವಾಸಿ ಜನರ ಸಾಂಸ್ಕೃತಿಕ ಜೀವನವನ್ನು ಅಧ್ಯಯನ ಮಾಡಿದ್ದಾರೆ. ಅಲ್ಲದೆ ಯಾವಾಗಲೂ ಆದಿವಾಸಿಗಳ ಪ್ರಗತಿಯ ಸಲುವಾಗಿ ಸರಕಾರಕ್ಕೆ ಸಲಹೆ ಮಾಡುತ್ತಲೇ ಇದ್ದಾರೆ. ಕಳೆದ ೫೦ ವರ್ಷಗಳಿಂದ ಮಾನವ ಶಾಸ್ತ್ರಜ್ಞರು ಮಾನವನ ಒಂದಿಲ್ಲ ಒಂದು ಜೀವನದ ವಿಭಾಗದ ಮೇಲೆ ಸಂಶೋಧನೆ ನಡೆಸಿದ್ದಾರೆ ಭಾರತದ ಪ್ರಗತಿಯ ಬಗ್ಗೆ ವಿಚಾರ ಮಾಡಬೇಕಾದರೆ ಈ ಐವತ್ತು ಕೋಟಿ ಜನತೆಯ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು ಅವ

ಕ್ಯಕವಿದೆ. ಯಾಕಂದರೆ ನಾವು ಮಾಡುತ್ತಿರುವ ಕಾರ್ಯಗಳು ಈ ಜನಕೋಟಿಯು ಜೀವನದಲ್ಲಿ ಯಾವ ಬದಲಾವಣೆಗಳನ್ನು ತಂದಿವೆ ಎಂಬುದರ ಮೇಲೆ ಅದು ಅವಲಂಬಿಸಿವೆ.

ಮಾನವ ಶಾಸ್ತ್ರಜ್ಞನು ಬದಲಾವಣೆಗಳನ್ನು ಸಮಾಜದಲ್ಲಿ ತರುವಾಗ ಸಮಾಜದ ಆಳವಾದ ಅಭ್ಯಾಸವನ್ನು ಮಾಡಬೇಕೆಂದೂ ಮತ್ತು ಸಮಗ್ರ ದಿಸೆಯಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸಿ ಎಲ್ಲ ಜನರಿಗೆ ಅದರಲ್ಲಿ ಪಾಲುಗೊಳ್ಳಲೇಬೇಕೆಂದೂ ಅವನು ಹೇಳುವನು. ಮಾನವ ಶಾಸ್ತ್ರವು ಇಂದಿನವರೆಗೆ ಗಳಿಸಿದ ಯಶಸ್ಸಿನ ಮೇಲೆ ಮುಂದೆಯೂ ಕೂಡ ಅದು ನಮ್ಮ ಜೀವನದಲ್ಲಿ ಮಹತ್ವದ ಪಾತ್ರವನ್ನು ವಹಿಸುವದೆಂಬುದರಲ್ಲಿ ಯಾವ ಸಂದೇಹವಿಲ್ಲ.

ಇಂದು ಮಾನವನು ವಿಜ್ಞಾನದ ಕಡೆಗೆ ತನ್ನ ಲಕ್ಷ್ಯ ಕೊಟ್ಟಿದ್ದಾನೆ. ವೈಜ್ಞಾನಿಕ ರೀತಿಯಲ್ಲಿ ನಿರ್ಮಾಣಗೊಂಡ ಜ್ಞಾನ ಭಾಂಡಾರವನ್ನು ಅವನು ಮುಖ್ಯವೆಂದು ತಿಳಿದು ಅದರ ಮೇಲೆ ತನ್ನ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾನೆ. ಮಾನವನ ಕಲ್ಯಾಣವಾಗಬೇಕಾದರೆ ವಿಜ್ಞಾನದ ಉಪಯೋಗ ಮಾಡಿಕೊಳ್ಳಲೇಬೇಕೆಂಬ ನಿರ್ಣಯಕ್ಕೆ ಅವನು ಬಂದಿದ್ದಾನೆ. ಉದಾತ್ತವಾದ ಮತ್ತು ಯೋಗ್ಯವಾದ ವಿಚಾರಗಳು ಮನುಷ್ಯನಿಗೆ ಎಲ್ಲ ಕಾಲದಲ್ಲಿಯೂ ಅವಶ್ಯವಾಗಿವೆ. ಮೊದಲು ಅಂತಹ ವಿಚಾರಗಳನ್ನು ಧರ್ಮ ಗುರುಗಳು ಜನರಿಗೆ ಬೋಧಿಸುತ್ತಿದ್ದರು. ಜಗತ್ತಿನ ಅನೇಕ ಧರ್ಮಗಳ ವೈಶಿಷ್ಟ್ಯಗಳನ್ನು ಅವಲೋಕಿ

ಸಿದಾಗ ಅಲ್ಲಿ ಮಾನವನ ಬಗ್ಗೆ ಪ್ರೀತಿಪ್ಪು, ಸಹಾನುಭೂತಿ, ಅನು ಕಂಪ ಮತ್ತು ವಿಶ್ವಬಂಧುತ್ವವನ್ನು ಪದೇ ಪದೇ ಸಾರಲಾಗಿದೆ. ಆದರೆ ಆಯಾ ಧರ್ಮಗಳನ್ನು ಆಚರಿಸುವ ವ್ಯಕ್ತಿಗಳು ತಮ್ಮ ಭಾವನೆಗಳನ್ನು ಪ್ರಪಂಚದ ಎಲ್ಲ ಮಾನವರ ಸಲುವಾಗಿ ಮೀಸ ಲಿಡದೆ ತಮ್ಮ ತಮ್ಮ ಧರ್ಮಗಳ ಅನುಯಾಯಿಗಳಿಗೆ ಮಾತ್ರ ಸೀಮಿತಗೊಳಿಸಿದ್ದಾರೆ. ಆದ್ದರಿಂದ ಇಂದು ಧರ್ಮಗಳ ಒಳ್ಳೆಯ ಭಾವನೆಗಳು ನಿರರ್ಥಕವಾಗತೊಡಗಿವೆ. ಈ ರೀತಿಯ ಅನುಭ ವವು ಈಗಾಗಲೇ ಮಾನವ ವಿಜ್ಞಾನಿಯ ಗಮನಕ್ಕೆ ಬಂದಿದೆ. ಮಾನವ ಶಾಸ್ತ್ರವು ಕಳೆದ ೧೫೦ ವರ್ಷಗಳಿಂದ ಸಾಧಿಸಿದ ಪ್ರಗ ತಿಯು ವೈಜ್ಞಾನಿಕವಾಗಿ ಇವೇ ಉದಾತ್ತ ವಿಚಾರಗಳ ಸಮ ರ್ಥನೆಯನ್ನು ಮಾಡಿಕೊಂಡಿರುವದನ್ನು ಕಾ ಣ ಬ ಹು ದು.

ಮಾನವ ಶಾಸ್ತ್ರವು ಮಾನವನ ಸಮಗ್ರ ಜೀವನದ ಅಧ್ಯಯನ ಮಾಡುವುದರಿಂದ ಇಲ್ಲಿ ಧರ್ಮ, ಜಾತಿ, ಮತ, ಪಂಗಡ, ಒಳ ಪಂಗಡ, ಜನಾಂಗ, ವರ್ಣ ಮುಂತಾದ ಯಾವ ರೀತಿಯ ಭೇದ ವಿಲ್ಲದೇ ಅವನ ಜೀವನವನ್ನು ಅಭ್ಯಸಿಸುವುದು ಮತ್ತು ಅದರ ಉದಾತ್ತವಾದ ಹಾಗೂ ಯೋಗ್ಯವಾದ ವಿಚಾರಗಳನ್ನು ಅವನು ಅಳವಡಿಸಿಕೊಳ್ಳದಿದ್ದರೆ ಮಾನವ ಜಾತಿಯ ಬದುಕಿಗೆ ಕಂಟಕ ಪ್ರಾಯವಾದುದಾಗಿದೆ ಎನ್ನಲಾಗಿದೆ. ಸಂಸ್ಕೃತಿಯ ವೈವಿ ಧ್ಯತೆಗಳು ಮಾನವನ ಜೀವನವನ್ನು ಪೋಷಿಸುತ್ತ ಬಂದಿವೆ ಯಾದ್ದರಿಂದ ಅವುಗಳನ್ನು ತೊಡೆದು ಹಾಕುವದು ಸಾಧ್ಯವಿಲ್ಲ. ಅವುಗಳನ್ನು ಕಾಯ್ದುಕೊಂಡು ಪ್ರಗತಿಯನ್ನು ಸಾಧಿಸಿ ಸುಖ ಮಯ ಜೀವನವನ್ನು ಮಾನವನು ಅನುಭವಿಸಬೇಕಾದರೆ

ವೈಜ್ಞಾನಿಕವಾಗಿ ಪ್ರತಿಪಾದಿಸಲ್ಪಟ್ಟ ಉದಾತ್ತವಾದ ಮತ್ತು ಯೋಗ್ಯವಾದ ಗುಣಗಳನ್ನು ಪ್ರತಿಯೊಂದು ಜನಾಂಗವು ಆಚರಿಸುವದು ಅವಶ್ಯವಾಗಿದೆ. ಇಂದಿನ ಮಾನವನು ವಿಜ್ಞಾನದಲ್ಲಿ ಆಸಕ್ತಿ ಹೊಂದಿದ್ದರಿಂದ ಅವುಗಳನ್ನು ಧಿಕ್ಕರಿಸಲು ಆಗುವುದಿಲ್ಲ. ಮುಂದೆ ಒಳ್ಳೆಯ ಕಾಲ ಸಮೀಪಿಸಿದೆ ಎಂದು ಆಶಾಕಿರಣವನ್ನು ಹೊಂದಿದ ಮಾನವ ವಿಜ್ಞಾನವು ಇನ್ನು ಮುಂದೆಯೂ ಕೂಡ ತನ್ನ ಸೇವೆಯನ್ನು ಮಾನವ ಕೋಟಿಗೆ ಕೊಡುವಂತಾಗಲೆಂದು ಹಾರೈಸುವ.



## ಆಧಾರ ಗ್ರಂಥಗಳು


1. An Introduction to physical Anthropology, Springfield 1945
*—Ashly Montagy M. F.*

2. An Introduction to Anthropology New york 1953.
*—Beals R. L. and Hoijer H.*

3. Social Anthropology
*—Bohaman Paul.*

4. Social Anthropology, London Cohen & west (1951) 1956.
*—Evans Pritchard E. E.*

5. Man and his works : The Science of cultural Anthropology, New york, Knopt 1948.
*—Herskovits, M. J.*

6. Man in the primitive world. Mc. Grew Hill, New york 1958.
*—Hoebel E. A.*

7. Anthropology: Race Language, Culture Psychology, prehistory, New york (1923) 1948
—*Kroeber A. L.*

8. ಮಾನವಶಾಸ್ತ್ರ ಪರಿಚಯ.
ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟನೆ. ೧೯೬೦.
—*Ainapur L. S.*

9. Cultural Anthropology: The Science of custom: Holt Rinehart and winston New york (1958)
—*Keesing F. M.*

10. An Introdution to Social Anthropology: Asia publishing house Bombay- 1. (1956) 1961
—*Majumdar D. N. and Madan T. N.*

11. Physical Anthropology & Anthropology (Selected readings) New york, 1964
—*Peter B. Hommond (Editor)*

12· Cultural and Social Anthropology (Selected Readings) New york 1964
*—Peter B. Hommond* (*Editor*)

13· Social Anthropology
Vol· No· I· & II
*—Piddington*

14· mirror for man : Fawcett publications Inc· Greenwich conn 1963 (Premier printing)
*—Clyde Kluckhohn*



## ಈ ಮಾಲೆಯ

## ಇತ್ತೀಚಿನ ಪ್ರಕಟನೆಗಳು

೧ ಪೇಟಿ ಮತ್ತು ಜಾಹೀರಾತುಗಳು —ಟಿ. ಎಂ. ಪಂಡಿತ
೨ ಆಯುರ್ವೇದಶಾಸ್ತ್ರ —ಧನ್ಯಕುಮಾರ ಇಜಾರಿ
೩ ವೈಲಾರದೇವರು —ಶ್ರೀನಿವಾಸ ರಿತ್ತಿ
೪ ಭಗವದ್ಗೀತೆ —ಎಲ್. ಸಿ. ಪಾಟೀಲ
೫ ಭೂಸಂರಕ್ಷಣೆ ಮತ್ತು ಒಣ ಬೇಸಾಯ —ಎಂ. ಎಂ. ಹೊಸಮನಿ
೬ ಜನಪದ ಕಾವ್ಯದಲ್ಲಿ ಜೀವನಧರ್ಮ —ಪಿ. ವ್ಹಿ. ಮಲ್ಲಾಪುರ
೭ ಆಧುನಿಕ ಕನ್ನಡ-ಹಿಂದೀ ಕಾವ್ಯ —ಸಿದ್ಧಲಿಂಗ ಪಟ್ಟಣಶೆಟ್ಟಿ
೮ ಪ್ರಾಚೀನ ಕರ್ನಾಟಕದ ಶಿಕ್ಷಣ ಕ್ರಮ —ಜಿ. ಎಸ್. ದೀಕ್ಷಿತ
೯ ತಮಿಳು ಶಿವಭಕ್ತೆ ಕಾರಿಕಾಲಮ್ಮ —ಎಂ. ಎಸ್. ಲಠ್ಠೆ
೧೦ ಜಾನಪದ ವೀರಗೀತೆಗಳು —ಬಿ. ಬಿ. ಮಹೀಶವಾಡಿ
೧೧ ಕಸದಿಂದ ರಸೋತ್ಪತ್ತಿ —ಸಂಜೀವರಾವ ಕಲ್ಲಾಪೂರ
೧೨ ವಚನಕಾರ ದೇವರದಾಸಿಮಯ್ಯ —ಎಸ್. ಎಸ್. ಬಾಣದ

ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ.